# ಅರ್ಪಣೆ

ಯಾರು ನನ್ನನ್ನು ಈ ವರೆಗೆ ಸಾಕಿ ಸಲಹಿ
ರಾಷ್ಟ್ರಸೇವೆ, ಸಮಾಜಸೇವೆಗಾಗಿ ಒಳ್ಳೇ ವಿಚಾರಗಳು ಬೇರೂರುವಂಥ
ವಾತಾವರಣದಲ್ಲಿ ಇರಲು ಇಂಬುಗೊಟ್ಟು
ಈ ಚಿಕ್ಕ ಕೃತಿಗಳು ಹೊರಡಲು ಕಾರಣರಾದರೋ ಅಂಥ ನನ್ನ
ತಂದೆ-ತಾಯಿಗಳ ಅಡಿದಾವರೆಗಳಲ್ಲಿಯೇ
ಈ ಪುಷ್ಪವನ್ನರ್ಪಿಸಿ ಬಿಡುವೆನು.

**ಕತೆಗಾರ**

# ಮುನ್ನುಡಿ

ಶ್ರೀ. ಭಾಲಚಂದ್ರ ಘಾಣೇಕರರ ಈ ಪುಸ್ತಕಕ್ಕೆ ಮುನ್ನುಡಿ ಬರೆಯಲು ನನಗೆ ತುಂಬಾ ಸಂತೋಷವೆನಿಸುತ್ತದೆ. ನಿಜವಾಗಿ ನೋಡಿದರೆ ಈ ಕಥಾಸಂಗ್ರಹಕ್ಕೆ ಮುನ್ನುಡಿಯ ಅವಶ್ಯಕತೆಯೇ ಇಲ್ಲವೆನ್ನಬಹುದು. ಅಷ್ಟು ಯೋಗ್ಯವಾದ ಕತೆಗಳೇ ಉಂಟು ಈ ಸಂಗ್ರಹದಲ್ಲಿ. ಪ್ರತಿಯೊಂದು ಕತೆಯು ಓದುಗರ ಹೃದಯವನ್ನು ಮಂಥಿಸಿ ವಿಚಾರಕ್ರಾಂತಿಯನ್ನುಂಟು ಮಾಡುವಂಥವಾಗಿರುವದರಿಂದ 'ಹೃದಯಮಂಥನ' ವೆಂಬ ಹೆಸರಾದರೂ ಈ ಪುಸ್ತಕಕ್ಕೆ ಒಪ್ಪುವಂತಹದಾಗಿದೆ ಈಗಿನ ಕನ್ನಡ ಸಾಹಿತ್ಯದಲ್ಲಿ ಬಳಕೆಯಲ್ಲಿರುವ ಕತೆಗಳಿಗೂ ಈ ಪುಸ್ತಕದಲ್ಲಿಯ ಕತೆಗಳಿಗೂ ಎಷ್ಟೋ ಅಂತರವುಂಟು. ಶ್ರೀ. ಭಾಲಚಂದ್ರರ ಪ್ರತಿಯೊಂದು ಕತೆಯಲ್ಲಿಯೂ ಉಚ್ಚವಾದ ತತ್ವಗಳು ಅಡಕವಾಗಿರುತ್ತವೆ. ಸಾಹಿತ್ಯ ಸೇವೆಯೊಂದೇ ಇವರ ಲೇಖನದ ಗುರಿಯಾಗಿರದೆ ಸಮಾಜಸೇವೆ ದೇಶಸೇವೆಗಳನ್ನು ಗುರಿಯಾಗಿಟ್ಟುಕೊಂಡು ಬರೆದಿರುವದರಿಂದ ಸರ್ವಸಾಮಾನ್ಯರಿಗೂ ಈ ಕತೆಗಳು ಪ್ರಿಯವಾಗುವಂತಿವೆ. ಇದರಲ್ಲಿಯ 'ದೇಶದ್ರೋಹಿ' 'ತ್ಯಾಗದ ಗುಡಿ' 'ನಾರೀರತ್ನ' ಮೊದಲಾದ ಕತೆಗಳಂತೂ ರಾಷ್ಟ್ರಪ್ರೇಮವನ್ನು ಜಾಗ್ರತಗೊಳಿಸುವಂಥವುಗಳಾಗಿವೆ. 'ಬಡವರ ರೊಟ್ಟಿ' ಎಂಬುದೊಂದು ಚಿಕ್ಕ ನಾಟಕವು. ಅದರಲ್ಲಿ ಬಂಡವಲಶಾಹಿಗಳಿಂದ ಬಡವರ ಮೇಲಾಗುತ್ತಿರುವ ಅತ್ಯಾಚಾರವನ್ನು ಚನ್ನಾಗಿ ಚಿತ್ರಿಸಿದ್ದಾರೆ. 'ನಾನೇ ಹೊಲೆಯ' 'ವಿಧವಾ ಕುಮಾರಿ' 'ನನ್ನ ಧರ್ಮ' ಈ ಕತೆಗಳಲ್ಲಿ ನಮ್ಮ ಹಿಂದೂ ಸಮಾಜದಲ್ಲಿಯ ದೋಷಗಳನ್ನು ಬೈಲಿಗೆಳೆದು ಸುಧಾರಣೆಯ ಮಾರ್ಗವನ್ನು ಒಳಿತಾಗಿ ಕಾಣಿಸಿಕೊಟ್ಟಿದ್ದಾರೆ. ಡಾಂಭಿಕ ಜನರ ಮೇಲೆ ಲೇಖಕರಿಗೆ ತುಂಬಾ ಸಿಟ್ಟು ಆಡಿಗಡಿಗೆ ಡಾಂಭಿಕರನ್ನು ಖಂಡಿಸುತ್ತ ಹೋಗಿದ್ದಾರೆ. ಈ ಲೇಖಕರ

ಕಥಾಸರಣಿಯು ಸುಂದರವಾದದ್ದಿದ್ದು ಭಾಷೆಯು ಒಳ್ಳೇ ಹಗುರುಳ್ಳದ್ದಾಗಿದೆ. ಈ ಎಲ್ಲ ಕತೆಗಳು ಬಿಡಿಬಿಡಿಯಾಗಿ ಈ ಮೊದಲೇ ಪ್ರಕಟವಾಗಿರುವದರಿಂದ ಕತೆಗಳ ಬಗ್ಗೆ ವಿಶೇಷ ಪರಿಚಯವನ್ನು ಮಾಡಿಕೊಡುವ ಆವಶ್ಯಕತೆ ಕಾಣುವದಿಲ್ಲ. ಅನೇಕ ಪತ್ರಿಕೆಗಳಲ್ಲಿ ವಿಮರ್ಶೆಗಳು ಬಂದು ಹೋಗಿರುವದರಿಂದ ಎಲ್ಲರಿಗೂ ಪರಿಚಯವುಂಟಾಗಿರುವದು ಸಹಜವಾಗಿದೆ. ಶ್ರೀ. ಫಾಣೇಕರರು ಚಿಕ್ಕ ವಯಸ್ಸಿನಲ್ಲಿಯೇ ಈ ಬಗೆಯ ಸಾಹಸವನ್ನು ಮಾಡಿದ್ದರಿಂದ ಅವರಿಗೆ ನಾನು ಧನ್ಯವಾದಗಳನ್ನರ್ಪಿಸದೆ ಇರಲಾರೆನು. ಇದೇ ರೀತಿ ಅವರು ಸಮಾಜಕ್ಕೆ ಉಪಯುಕ್ತವಾದ ಪುಸ್ತಕಗಳನ್ನು ಬರೆಯುತ್ತ ಹೋಗಬೇಕಾಗಿ ಅವರಲ್ಲಿ ನನ್ನ ಬಿನ್ನಹವಿದೆ. ಕನ್ನಡಿಗರಾದರೂ ಅವರಿಗೆ ಆಗಾಗ್ಗೆ ಯೋಗ್ಯವಾದ ಸಹಾಯವನ್ನು ಮಾಡಿ ಪ್ರೋತ್ಸಾಹನವನ್ನೀಯಲೆಂದು ಹಾರೈಸುತ್ತೇನೆ.

ದತ್ತಾತ್ರೇಯ ಕರಮರಕರ

# ಪ್ರಕಾಶಕರ ನುಡಿ

ನಮ್ಮ ಸ್ವದೇಶೀ ಪೇಪರಮಾರ್ಟಿನಿಂದ ಪ್ರಕಾಶವಾದುದು ಇದೇ ಮೊದಲನೇ ಗ್ರಂಥ. ನಾವೀ ಕಾರ್ಯವನ್ನು ಕೈಕೊಂಡುದು ವ್ಯವಸಾಯದೃಷ್ಟಿಯನ್ನಿಟ್ಟುಕೊಂಡು ಲಾಭಪಡೆಯಬೇಕೆಂದಲ್ಲ; ಹಾಗಿದ್ದರೆ ಇಷ್ಟು ದೊಡ್ಡ ಪುಸ್ತಕಕ್ಕೆ ಅತ್ಯಲ್ಪ ಬೆಲೆಯನ್ನಿಡುತ್ತಿರಲಿಲ್ಲ. ಸಮಾಜ ಚಿತ್ರವನ್ನು ಒಳ್ಳೇ ಅಚ್ಚುಕಟ್ಟಾಗಿ ಚಿತ್ರಿಸುವ ಶ್ರೀ ಫಾಣೇಕರರ ಕತೆಗಳ ಮೇಲೆ ನಮಗೆಂದಿನಿಂದಲೂ ಪ್ರೀತಿ. ಅವರ ಕೆಲವೊಂದು ಒಳ್ಳೇ ಕೃತಿಗಳನ್ನು ಒಂದೆಡೆಗೆ ಸೇರಿಸಿ ಪುಸ್ತಕರೂಪವಾಗಿ ಕನ್ನಡಿಗರ ಕೈಗೆ ಕೊಡಬೇಕೆಂಬ ಸದುದ್ದೇಶದಿಂದ ಈ ಕಾರ್ಯಕ್ಕೆ ಪ್ರವೃತ್ತರಾದೆವು. ಶ್ರೀ ಫಾಣೇಕರರು ಪ್ರೇಮಪೂರ್ವಕವಾಗಿ ಒಪ್ಪಿಗೆಯನ್ನೂ ಇತ್ತರು. ಅದೇ ಮೇರೆಗೆ ಶ್ರೀ ಕರಮರಕರ ದತ್ತರಾಯರಾದರೂ ನಮ್ಮ ಬಿನ್ನಹಕ್ಕೆ ಒಪ್ಪಿಕೊಂಡು ಮುನ್ನುಡಿಯನ್ನು ಬರೆದುಕೊಟ್ಟರು. ಆದುದರಿಂದ ಇವರಿಬ್ಬರಿಗೂ ಹೃದಯಪೂರ್ವಕವಾಗಿ ಆಭಾರ ಮನ್ನಿಸದೆ ಇರಲಾರೆವು. ಈ ನಮ್ಮ ಸಾಹಸಕ್ಕೆ ಕನ್ನಡಿಗರೆಲ್ಲರೂ ದುಡ್ಡಿನಿಂದ ನೆರವಾದರೆ ಇದೇ ಮೇರೆಗೆ ಮುಂದಾದರೂ ಅಲ್ಪಬೆಲೆಯಲ್ಲಿ ಅನೇಕ ಗ್ರಂಥಗಳನ್ನು ಒದಗಿಸಿ ಕೊಡುವದಕ್ಕಾಗಿ ಯತ್ನಿಸದೆ ಇರಲಾರೆವು.

**ಗೋ. ಕೃ. ಕೇಳಕರ**

ಒಡೆಯರು- ಸ್ವದೇಶೀ ಪೇಪರಮಾರ್ಟ ಧಾರವಾಡ.

# ಪರಿವಿಡಿ

# ವಿಧವಾ ಕುಮಾರಿ!

" ಸರಸೀ, ಸರಸೀ, ಎಲ್ಲಿ ಹಾಳಾಗಿ ಹೋಗೀಯೆ ನಮ್ಮವ್ವಾ. ನಿನ್ನ ಹೆಣಾ ಎತ್ಲಿ. ಹಗಲೂ ಹನ್ನೆರಡು ತಾಸೂ ಪಿರೀಪಿರೀ ತಿರಗೋದ್ರಾಗ ಇರತೀಯಲ್ಲ ನಮ್ಮವ್ವಾ." ಗುಡುಗಿನಂತೆ ಗರ್ಜಿಸುತ್ತ ಚಂದ್ರಾಬಾಯಿ ಸರಸರನೆ ಉದ್ದಕ್ಕೆ ಅಡಿಗೆಯ ಮನೆಯ ತನಕ ನಡೆದಳು. ಪಡಸಾಲೆಯಲ್ಲಿ ಮಲಗಿದ ಸರಸೂನನ್ನು ನೋಡಲೇ ಇಲ್ಲ ಸರಸೂಗೆ ವಿಪರೀತ ತಲೆಶೂಲಿ ಚಳಿಚಳಿಯಾಗಿ ಹೊದ್ದುಕೊಂಡು ಮಲಗಿಕೊಂಡಿದ್ದಳು. ಕೆರಳಿದ ಕೇಸರಿಯಂಥ ಅತ್ತೆಯ ಆರ್ಭಟವನ್ನು ಕೇಳಿ ಎದ್ದು ಕುಳಿತಳು. " ಇಲ್ಲೇ ಇದ್ದೇನೆ " ಎಂದು ನುಡಿಯುವಷ್ಟರಲ್ಲಿಯೇ ಅತ್ತೆಯು ಅಡಿಗೆಯ ಮನೆಯಿಂದ ಪಡಸಾಲೆಗೆ ಮರಳಿ ಬಂದಿದ್ದಳು. ಹಂಗಿಸುವ ದನಿಯಲ್ಲಿ " ಇಲ್ಲೇ ಇದ್ದೇನೆ. ಹೇಳಲಿಕ್ಕೆ ನಾಚಿಕೆಯಾಗುವದಿಲ್ಲವೇ ? ಮೊದಲೇ ಇಷ್ಟು ಬೊಗಳಲಿಕ್ಕೆ ಏನಾಗಿತ್ತೇ ನಿನಗೆ ಬೇನೆ ? ಅವ್ವಯ್ಯಾ, ಸೋಗಲಾಡೀ, ಕೆಟ್ಟ ಬಿಸಿಲಿನಲ್ಲಿ ಕಂಬಳೀ ಹೊದ್ದುಕೊಳ್ಳಬೇಕೆನ್ನಿಸಿತೇ ? ಯಾವಾಗಲೂ ಮಲಗುವದರಲ್ಲಿಯೇ ಇರುತ್ತೀಯಲ್ಲೇ ನೀನು. ಕುಂಭಕರ್ಣ ತನ್ನ ಎಲ್ಲ ನಿದ್ದೆ ನಿನಗೇ ಕೊಟ್ಟ ಹಾಗೆ ಕಾಣುತ್ತದೆ. " ಚಂದ್ರಾಬಾಯಿಯು ಸನಾದಿಯುವರಂತೆ ಒಂದೇ ಸವನೆ ಸುತಿ ಹಚ್ಚಿದಳು. ಗಾಯದ ಮೇಲೆ ಬರೆ ಎಳೆದಂತೆ ತಲೆನೋವಿನ ತಾಪದಲ್ಲಿ ಅತ್ತೆಯ ಕಾಟವೊಂದು ಬೇರೆ ಸರಸೂಗೆ. ಬಹಳ ಪಿತ್ತವಾಗಿ ತಳಮಳಿಸುತ್ತಿದ್ದಿತು. ಒಮ್ಮೆಲೆ ಅಂಗಳಕ್ಕೆ ಧಾವಿಸಿ ಬಡಬಡನೆ ಹಿಂದೆ ಮಾಡಿಕೊಂಡಳು. ಇಷ್ಟಾಪರೂ ಆ ರಕ್ಕಸಿ ಅತ್ತೆಗೆ ಕರುಣೆ ಬರಲಿಲ್ಲ.

" ಕಾರಲಿಕ್ಕೇನಾಯಿತೇ ? ಗಂಡ ಸತ್ತು ಒಂದು ವರ್ಷವಾಗಿ ಹೋಯಿತು ಈಗ ನಿನಗೆ ಬಯಕೆ ಸುರುವಾಯಿತೇನು ? ನಿನ್ನ ಸುಡುಗಾಡು ಮೋರೆಗೆ ಬೆಂಕೀ ಹಚ್ಚಲೀ. ಯಾವ ಮುಹೂರ್ತಕ್ಕೆ ನಮ್ಮ ಮನೆಗೆ ಕಾಲಿಕ್ಕಿದೆಯೋ ? ನಿನ್ನ ಗಂಡನನ್ನು ನುಂಗೋದಲ್ದೆ ನಮ್ಮವ

ಯಾರಾದರೂ ನೋಡಿದರೆ ಏನೆಂದಾರು ಪರರ ಮನೆಯಲ್ಲಿ ಹೀಗೆ ವರ್ತಿಸಿದರೆ ಎಂದು ಒಂದು ಸಲ ಮನಸ್ಸಿನಲ್ಲಿ ಬಂದಿತೇನೋ. ಆದರೆ ಇಂಥ ಪೊಳ್ಳು ಬೆದರಿಕೆಗಳಿಗೆ ಬೆದರುವವನಲ್ಲ ನಮ್ಮ ಗೋಪಾಲ. ಸತ್ಯಕ್ಕಾಗಿ ಸಾಯುವವನು! ಯಮದೂತನಂತೆ ಅತ್ತೆ ಎಲ್ಲಿ ಬರುವಳೋ ಎಂದು ಸರಸೂಗೆ ಬೆದರಿಕೆಯಿತ್ತು. ಗೋಪಾಲನು ಮಾತ್ರ ಕೇಳಲಿಲ್ಲ. ಕಾಫಿಯನ್ನು ಮಾಡಿ ಅವಳಿಗೂ ಒಂದು ಲೋಟ ಕೊಟ್ಟು ತಾನೂ ಕುಡಿದು ಮುಗಿಸಿದ ಹೊರಗೆ ಬಂದ ಬಳಿಕ ತನ್ನ ಟ್ರಂಕಿನೊಳಗಿನ ಅಮೃತಾಂಜನದ ಡಬ್ಬಿಯನ್ನು ತೆಗೆದು ಸರಸೂನ ಕೈಗೆ ಕೊಟ್ಟ. "ಇದನ್ನು ಹಚ್ಚಿಕೊಂಡು ಸ್ವಸ್ಥವಾಗಿ ಮಲಗಿಕೊಳ್ಳಿರಿ" ಎಂದು ಹೇಳಿದ. ಆ ಡಬ್ಬಿಯನ್ನು ಹಾಗೇ ತೆಗೆದಿಟ್ಟು ಸರಸೂ ಅಡಿಗೇ ಮಾಡುವದಕ್ಕೆ ಮೊದಲು ಮಾಡಿದಳು ಗೋಪಾಲನು ತನಗೆ ಹಸಿವೆಯಿಲ್ಲವೆಂದು ಪರಿಪರಿಯಾಗಿ ಹೇಳಿದರೂ ಅವಳು ಕೇಳಲಿಲ್ಲ ಪರರ ಮನೆಯೆಂಬ ಭಯವಿದ್ದರೂ ಆದನ್ನು ಗಮನಿಸದೆ ಅಡಿಗೆಯಲ್ಲಿಯೂ ಅವಳಿಗೆ ನೆರವಾಗಿ ಅಡಿಗೆಯಾದೊಡನೆ ಊಟ ಮುಗಿಸಿಕೊಂಡು ಮಂಚದ ಮೇಲೆ ಬಂದು ಅಡ್ಡಾದ. ನಿದ್ದೆ ಎಲ್ಲಿಂದ ಬರಬೇಕು? ಆ ವಿಧವಾ ಕುಮಾರಿಯ ಬಗ್ಗೆ ಯೋಚನೆಗಳೇ ಬರತೊಡಗಿದವು. ಅವಳ ವಿನಯ, ಕಾರ್ಯಕುಶಲತೆ, ಆಜ್ಞಾಧಾರಕತ್ವ ಇವೆಲ್ಲವುಗಳನ್ನೂ ಕಂಡು ಅವನಿಗೆ ಒಂದು ಬಗೆಯ ಆದರವೂ ಅವಳು ಪಡುತ್ತಿರುವ ಕಷ್ಟಗಳಿಗಾಗಿ ಸಹಿಸಲಾರದಷ್ಟು ದುಃಖವೂ ಆಯಿತು. ಸರಸೂ ಬೇಗನೆ ತನ್ನ ಊಟ ಎಂಜಲಗೋಮವನ್ನು ಮುಗಿಸಿಕೊಂಡು ಎಲೆ ಅಡಿಕೆ ತಟ್ಟೇ ತಂದು ಗೋಪಾಲನ ಮುಂದಿಟ್ಟಳು. ಅವನಾದರೂ ಅವಳ ದಾರಿಯನ್ನೇ ಕಾಯುತ್ತಲಿದ್ದ. ಅವಳ ಕರುಣಾಮಯವಾದ ಕತೆಯನ್ನು ಈಗಾಗಲೇ ಒತ್ತಾಯ ಪಡಿಸಿ ಅವಳಿಂದ ಅಲ್ಪ ಸ್ವಲ್ಪ ತಿಳಿದುಕೊಂಡಿದ್ದ. ಇನ್ನೂ ಕೆಲವು ವಿಷಯ ಕೇಳಬೇಕೆನ್ನಿಸಿತು. ಸದಯಾಂತಃಕರುಣನಾದ ಗೋಪಾಲನಂತಹ ಕರ್ತಾಪುರುಷನಿಂ ಯಾವದೇ ವಿಷಯನ್ನಡಗಿಸಿಡುವದದು ಅವಳಿಗೆ ಉಚಿತವೆನಿಸ ಅವನ ಪರೋಪಕಾರ ಬುದ್ಧಿ, ದಯಾಮಯವಾದ ಹೃದಯ, ವಿನ

ಧೈರ್ಯ ಇವೆಲ್ಲವುಗಳನ್ನು ಕಂಡು ಅವಳಿಗೆ ಒಳ್ಳೇ ಪೂಜ್ಯಭಾವನೆಯಾಗಿ ಹೋಗಿದ್ದಿತು ಸಂಕೋಚವನ್ನು ಬದಿಗಿರಿಸಿ ಅವನ ಎಲ್ಲ ಪ್ರಶ್ನೆಗಳಿಗೂ ಉತ್ತರವನ್ನಿತ್ತಳು.

" ನೀವು ಬೇರೆಯವರೆಂದು ನಾನು ಭಾವಿಸಿಲ್ಲ. ಅದಕ್ಕಾಗಿಯೇ ನಿಮ್ಮ ಮುಂದೆ ಹೊಟ್ಟೇ ತೋಡಿಕೊಂಡೆ " ಎಂದು ಹೀನ ಸತ್ವಳಾಗಿ ನುಡಿದಳು ಆಮಂತ್ರಣ ಕೊಡದಿದ್ದರೂ ಆಗಂತುಕವಾಗಿ ಕಣ್ಣೀರು ಧಾರೆ ಧಾರೆಯಾಗಿ ಬರತೊಡಗಲು ಅವಳು ಒಳಗೆ ಹೊರಟು ಹೋದಳು.

ಸೂರ್ಯಾಸ್ತವಾಯಿತು. ಲಗ್ನದ ಮನೆಗೆ ಹೋದವರೆಲ್ಲರೂ ಬಂದರು. ಯಾರಿಗೂ ಊಟದ ಚಿಂತೆಯಿರಲಿಲ್ಲ. ಆ ಸುದ್ದಿ ಈ ಸುದ್ದಿ ಮಾತನಾಡುವದರಲ್ಲಿಯೇ ಒಂಬತ್ತು ಬಡೆಯಿತು. ಸರಸೂ ಎಲ್ಲರಿಗೆ ಹಾಸಿಗೆ ಹಾಸಿ ಸಿದ್ಧಮಾಡಿಯೇ ಇಟ್ಟಿದ್ದಳು. ಎಲ್ಲರೂ ತಲೆಗೆ ಕೈ ಕೊಟ್ಟರು. ಸರಸೂಗೆ ಮಾತ್ರ ವಿರಾಮವಿರಲಿಲ್ಲ. ಅತ್ತೆಯವರು ಹೊಸ ಆರ್ಡಿನನ್ಸು ತೆಗೆದು ಸ್ಪೆಶಲ್ ಪಾವರ ಪ್ರಕಾರ ಒಂದು ಕೆಲಸ ಹೂಡಿಯೇ ಇಷ್ಟರು. ಹೊಲದಿಂದ ಬಂದ ತೊಗರೆಯ ಚೀಲವೊಂದಿತ್ತು. ಅವನ್ನು ನೀರಲ್ಲಿ ನೆನೆಹಾಕಿ ಸರಸೂ ಇಂದು ಮಲಗಬೇಕು.

ಶುಭ್ರವಾದ ಬೆಳದಿಂಗಳು. ಶಾಮ-ಗೋಪಾಲರೆಲ್ಲರೂ ಸೆಕೆಗಾಲವೆಂದು ಅಂಗಳದಲ್ಲಿಯೇ ಮಲಗಿಕೊಂಡಿದ್ದರು. ಗೋಪಾಲನಿಗಿನ್ನೂ ನಿದ್ದೆ ಹತ್ತಿರಲಿಲ್ಲ. ಶ್ಯಾಮನಿಗೆ ಈಗ ತಾನೆ ಜಂಪು ಹಿಡಿದಿದ್ದಿತು. ಅಷ್ಟರಲ್ಲಿಯೇ ಸರಸೂ ಗಾಬರಿಯಾಗಿ ಹೊರಗೆ ಬಂದಳು. ಶ್ಯಾಮನನ್ನು ಒಂದೆರಡು ಸಲ ಕೂಗಿ ಎಬ್ಬಿಸಿದಳು.

"ಭಾವನವರೇ, ಉಕ್ಕಡ ಹರಿದು ನೀರಿನ ಕೊಡವು ಬಾವಿಯಲ್ಲಿ ಬಿದ್ದಿತು ಸ್ವಲ್ಪ ತೆಗೆದುಕೊಡವಿರಾ?" ಬೆದರುದನಿಯಲ್ಲಿ ನುಡಿದಳು.

" ಎಲ್ಲಿಯ ಕೊಡವನ್ನು ತಂದೀ ಹೋಗು. ಇಲ್ಲದ ಕಿಟಕಿಟ ಹಚ್ಚಬೇಡ." ಎಂದು ಬೆದರಿಸಿ ಶ್ಯಾಮನು ಘೊರಕೇ ಹೊಡೆಯುತ್ತ ಮಲಗಿಕೊಂಡನು ನೋಡಿದಿರಾ ಬಿ. ಎ. ವರೆಗೂ ಓದಿದ ಸುಶಿಕ್ಷಿತನು ತಮ್ಮ ಅತ್ತಿಗೆಯನ್ನು ನಡೆಸಿಕೊಳ್ಳುತ್ತಿದ್ದ ಕ್ರಮವನ್ನು ಅವಳು ಉಪಾಯಗಾಣದೆ ಹೊರಟುಹೋದಳು.

ವಾಯಿತು. ಅದಕ್ಕಾಗಿ ಶ್ಯಾಮನು ಧಾರವಾಡದಲ್ಲಿ ಇಳಿದು ಹೋಗುವದಕ್ಕಾಗಿ ಗೋಪಾಲನಿಗೆ ಒತ್ತಾಯ ಪಡಿಸಬೇಕಾಯಿತು. ಶ್ಯಾಮನಾದರೂ ಒಂದೆರಡು ದಿವಸಗಳಲ್ಲಿಯೇ ಗದುಗಿಗೆ ಹೋಗತಕ್ಕವನಿದ್ದ. ಕೂಡಿಯೇ ಹೋದರಾಯಿತೆಂದು ಅವನಿಗೆ ನಿಲ್ಲಲಿಕ್ಕೆ ಹೇಳಿದ.

ಶ್ಯಾಮನು ಧಾರವಾಡದವನಾದರೂ ಗದುಗಿನಲ್ಲಿಯೇ ವಾಸಿಸುತ್ತಿದ್ದ. ಅಲ್ಲಿಯ ಇಂಗ್ಲೀಷ ಶಾಲೆಯಲ್ಲಿಯೇ ಅವನಿಗೂ ಕೆಲಸವಿದ್ದಿತು. ಅವನ ತಾಯಿ ದತ್ತಾತ್ರೇಯನ ಆರಾಧನೆ ಕೈಕೊಂಡುದರಿಂದ ಅವನು ಬೇಸಿಗೆಯ ಬಿಡುವಿನ ವುಟ್ಟಿಗೆ ಧಾರವಾಡದಲ್ಲಿಯೇ ಮನೆ ಮಾಡಿದ್ದ. ಆರಾಧನೆ ಗೀರಾಧನೆ ಮಾಡುವ ಪುಣ್ಯಾತ್ಮಳು ತನ್ನ ಸೊಸೆಯನ್ನು ಇಷ್ಟೇಕೆ ಪೀಡಿಸುತ್ತಿರಬಹುದೆಂದು ವಾಚಕರಿಗೆ ಸಂದೇಹ ಬಂದಿರಬಹುದಷ್ಟೆ? ಸಹಜವಿದೆ. ಆದರೆ ಅದೆಂಥ ಆರಾಧನೆ! ಈಗಿನ ಕಾಲದ ಆರಾಧನೆಗಳೆಂದರೆ ಅವೊಂದು ಚೈನೀ ಹೊಡೆಯುವದಕ್ಕೂ, ಪ್ರತಿಷ್ಠೆ ಪಡೆಯುವಕ್ಕೂ ಸಾಧನಗಳಾಗಿವೆ.

ಜಹಾಗೀರದಾರ ಬಳವಂತರಾಯರೂ ಗದುಗಿನವರು. ಅವರಿಗೆ ಸುಶೀಲೆಯೊಬ್ಬಳೇ ಒಬ್ಬ ಮಗಳು ಅವಳು ಇಂಗ್ಲೀಷ ಆರನೇ ಇಯತ್ತೆಯಲ್ಲಿದ್ದಳು. ಮನೆಯಲ್ಲಿ ದಿನಾಲು ಗಂಟೆ ಎರಡು ಗಂಟೆ ಅವಳಿಗೆ ಅಭ್ಯಾಸವನ್ನು ಹೇಳಿಕೊಡುವದಕ್ಕಾಗಿ ಶ್ಯಾಮನನ್ನು ನಿಯಮಿಸಿದ್ದರು. ಆದಕ್ಕಾಗಿ ಶ್ಯಾಮನಿಗೂ ಅವರಿಗೂ ಅಷ್ಟೊಂದು ಪರಿಚಯ. ಆ ಸಂಬಂಧದಿಂದಲೇ ಅವನನ್ನು ಬೊಂಬಾಯಿಗೆ ಕರೆದೊಯ್ದಿದ್ದರು. ದೇಸಾಯರ ಮನೆಯ ಲಗ್ನದ ಆಮಂತ್ರಣದ ಮೂಲಕ ಶ್ಯಾಮನ ಜೊತೆಗೆ ಅವರೂ ಧಾರವಾಡಕ್ಕೆ ಬಂದಿಳಿದರು. ಲಗ್ನದ ಮನೆಗೆ ಅಕ್ಕೀ ಕಾಳಿಗೆ ಹೋದ ಸಮಾಚಾರವನ್ನಂತೂ ಹಿಂದೆಯೇ ಹೇಳಿ ಬಿಟ್ಟದ್ದೇವೆ. ಇಷ್ಟರಲ್ಲಿಯೇ ತಿಂಡಿಯನ್ನು ಕೂಡ ತಿಂದು ಮುಗಿಸಿರಬಹುದು. ಆ ಸುದ್ದಿ ನಮಗೇಕೆ? ಅದರಿಂದ ನಮಗೆ ಬರುವದಾದರೂ ಏನು? ಬಾಯಿಯಲ್ಲಿ ನೀರು. ಇಷ್ಟೇ ಅಲ್ಲವೇ? ಹೋಗಲಿ ಬಿಡಿ ಆ ಸಂಗತಿ.

ಇತ್ತ ಗೋಪಾಲನಿಗೆ ಮಾತ್ರ ಸಮಾಧಾನವಿಲ್ಲ. ಒಂದು ವಿಧವಾದ ಸಂಕಟವಾಗ ತೊಡಗಿತು. ಮದುವೆಗೆ ಕರೆದೊಯ್ಯಲಿಲ್ಲವೆಂದಲ್ಲ!

ಬಾಲ ವಿಧವೆಯ ಗೋಳನ್ನು ಕಂಡು ! ತೀಕ್ಷ್ಣ ಬುದ್ಧಿಯ ಗೋಪಾಲನು ಚಂದ್ರಾಬಾಯಿಯು ತನ್ನ ಸೊಸೆಯನ್ನೆಷ್ಟು ಪೀಡಿಸುತ್ತಿರಬಹುದೆಂಬುದನ್ನು ಅವಳ ಒಂದೆರಡು ಮನೆ ಮಾತುಗಳಿಂದಲೇ ಕಂಡುಹಿಡಿದನು. ಸರಸೂನ ಬಾಡಿ ಬೆಂಡಾದ ಮುಖವನ್ನು ನೋಡಿದೊಡನೆ ಅವಳು ಬೇನೆಯಿಂದ ಬಳಲುತ್ತಿರುವಳೆಂದು ಅವನಿಗೆ ಚನ್ನಾಗಿ ಅರಿಕೆಯಾಯಿತು. ಅಂಥ ಪೀಡಿತಳಿಂದ ಆತಿಥ್ಯವನ್ನು ಮಾಡಿಸಿಕೊಳ್ಳುವದಕ್ಕೆ ಮನಸ್ಸು ಹಿಂಜರಿಯಿತು.

"ತಾವು ಹಸಿದುಕೊಂಡಿರಬಹುದು ಚಹಾ ಮಾಡಿ ಕೊಡಲೇ?" ಮೃದುವಾದ ದನಿಯಿಂದ ಸರಸೂ ಕೇಳಿದಳು ಆಹಾ ! ಅದೆಷ್ಟು ವಿನಯ ! "ನಾನು ಚಹಾ ಹಾಗೂ ಪರದೇಶಿ ಸಕ್ಕರೆಗಳಿಗೆ ಬಹಿಷ್ಕಾರ ಹಾಕಿ ಬಿಟ್ಟಿದ್ದೇನೆ. ಒಂದು ಲೋಟ ನೀರು ಕೊಟ್ಟು ಬಿಡಿ ಸಾಕು" ಎಂದು ಹೇಳಿದ. "ಬರೀ ನೀರನ್ನೇನು ಕುಡಿಯೋದು ? ಕಾಫಿಯನ್ನಾದರೂ ಮಾಡಿಕೊಡುತ್ತೇನೆ." ಎಂದು ನುಡಿದು ಸರಸೂ ಒಳಗೆ ಹೋಗಿ ಕಾಫಿಗೆ ಎಸರನ್ನಿಟ್ಟಳು. ತಲೆ ತಿರುಗುವದಿನ್ನೂ ನಿಂತಿರಲಿಲ್ಲ. ಮತ್ತೆ ಅವಳ ಪಿತ್ತ ಜೋರಾಯಿತು. ಬಚ್ಚಲಮನೆಗೆ ಹೋಗಿ ಕಾರತೊಡಗಿದಳು. ಕಾರುವ ಸಪ್ಪಳವು ಕೇಳುತ್ತಲೇ ಗೋಪಾಲ ಅವಳಿದ್ದೆಡೆಗೆ ಹೋದ.

"ತಲೆ ಹಿಡಿಯಬೇಕೇನು' ಮುಂದೆ ಬಂದು ಕೇಳಿದ. ಅವಳು ತಾಳಿದ ಮೌನವೇ ಒಪ್ಪಿಗೆಯೆಂದು ತಿಳಿದು ಗಟ್ಟಿಯಾಗಿ ತಲೆ ಹಿಡಿದ. ತನಗೆ ತಿಳಿದ ಮಟ್ಟಿಗೆ ಅವಳಿಗೆ ಸಮಾಧಾನವನ್ನು ಕೊಡುತ್ತಲಿದ್ದ. ತುಸು ಹೊತ್ತಿನಲ್ಲಿಯೇ ಪಿತ್ತವೆಲ್ಲ ಹೊರಬಿದ್ದು ಹೋಯಿತು. ಅವಳು ಎದ್ದು ಬಾಯಿ ತೊಳೆದುಕೊಂಡಳು.

ಸ್ವಸ್ಥವಾಗಿ ಮಲಗಿರಿನ್ನು, ನನಗೇನೂ ಕಾಫಿಯ ಅವಶ್ಯಕತೆ ಇಲ್ಲ. ಸುಮ್ಮನೆ ತೊಂದರೆ ಪಟ್ಟುಕೊಳ್ಳಬೇಡಿರಿ ಎಂದು ಅದೆಷ್ಟೋ ಅವಳಿಗೆ ಹೇಳಿದ. ಅವಳು ಕೇಳಲಿಲ್ಲ.

"ಹಾಗಾದರೆ ನೀವು ಸ್ವಸ್ಥ ಕುಳಿತುಕೊಳ್ಳಿರಿ. ನಾನೇ ಕಾಫೀ ಮಾಡುತ್ತೇನೆ" ಎಂದು ಹೇಳಿ ಸ್ವತಃ ಕಾಫೀ ಮಾಡಲಿಕ್ಕೆ ತೊಡಗಿದ.

ರನ್ನೂ ಕಾಣೆಯಾಗಿ ಮಾಡಿಬಿಟ್ಟೆ. ಸಾಕು ಏಳಿನ್ನು ಮನೆಯ ಕಸ ಗೂಡಿಸಿ ದೀಪಕ್ಕೆ ಎಣ್ಣೆ ಹಾಕು. ಸಂಜೆಯ ಮೋಟಾರಿಗೆ ಶಾಮೂ ಬರತಾನೆ ಗೊತ್ತಿಲ್ಲೇನು? ಆವನ ಜೊತೆಗೆ ಜಾಹಗೀರದಾರರೂ ಬರುವವರಿದ್ದಾರಂತೆ'' ಎಂದು ಹುಕುಂ ಬಜಾಯಿಸಿ ಚಂದ್ರಾಬಾಯಿ ಹೊರಟು ಹೋದಳು.

ಅತ್ತೆಯ ಹುಕುಂ ಎಂದರೆ ರಾಣೀಸರಕಾರದ ಹುಕುಮಿಗಿಂತಲೂ ಕಡಕು. "ಅಯ್ಯೋ, ಯಾರಾದರೂ ತಮ್ಮ ಗಂಡನನ್ನು ನುಂಗ ಬಯಸುವದುಂಟೇ? ಪಂಢರಪುರ ಯಾತ್ರೆಗೆಂದು ಹೊರಟುಹೋದ ನಮ್ಮ ಮಾವನವರು ಈವರೆಗೆ ಬಾರದೆ ಇದ್ದುದೂ ನನ್ನದೆ ಅಪರಾಧವೇ? ಪಿತ್ತದಿಂದ ಕಾರಿಕೊಳ್ಳುವದೂ ಒಂದು ಘೋರ ಅನ್ಯಾಯವೇ? ದೇವಾ ಈ ಬಾಲವಿಧವೆಯು ಯಾವ ಪಾಪವನ್ನು ಮಾಡಿರುವಳೆಂದು ಇಂತು ದಂಡಿಸುತ್ತಿರುವೆ?'' ಪರಮಾತ್ಮನಲ್ಲಿ ದೈನ್ಯಭಾವದಿಂದ ಮೊರೆಯಿಡುತ್ತ ಸರಸೂ ಅಳತೊಡಗಿದಳು. ಆದರೆ ಮತ್ತೆ ಅತ್ತೆಯವರ ಆಜ್ಞೆ ಸ್ಮರಣೆಗೆ ಬಂದಿತು ಅಶಕ್ತತೆಯಿಂದ ಜೋಲಿ ಹೋಗುತ್ತಿದ್ದರೂ ಅವರು ಹೇಳಿದ ಕೆಲಸವನ್ನು ಪೂರೈಸಿದಳು.

ಸಂಜೆಯಾಯಿತು. ಚಂದ್ರಾಬಾಯಿಯು ಮಗನ ಬರುವಿಕೆಯ ದಾರಿಯನ್ನೇ ನೋಡುತ್ತ ಬಾಗಿಲಬಳಿ ಬಂದು ನಿಂತಿದ್ದಳು. ತುಸು ಹೊತ್ತಿನಲ್ಲಿಯೇ ಭರ್ರೆಂದು ಮೋಟಾರೊಂದು ಬಾಗಿಲ ಬಳಿ ಬಂದು ನಿಂತಿತು. ಶ್ಯಾಮು, ಗೋಪಾಲ, ಜಾಹಗೀರದಾರರು ಮತ್ತು ಅವರ ಮಗಳು ಸುಶೀಲೆ ಈ ನಾಲ್ವರೂ ಇಳಿದು ಮನೆಯೊಳಗೆ ನಡೆದರು. ಕಾಲು ತೊಳೆಯುವದಕ್ಕಾಗಿ ಸರಸೂ ಎಲ್ಲರಿಗೂ ನೀರು ಕೊಟ್ಟಳು. ಶಾಮನು ತನ್ನ ತಾಯಿಗೆ ಅತಿಥಿಗಳೆಲ್ಲರ ಪರಿಚಯುವನ್ನು ಮಾಡಿಕೊಡುವಷ್ಟರಲ್ಲಿಯೇ ಅಕ್ಕೀಕಾಳಿಗೆಂದು ದೇಸಾಯರ ಮನೆಯವರು ಕರೆಯುವದಕ್ಕಾಗಿ ಬಂದೇಬಿಟ್ಟರು. ಲಗ್ನದ ಮನೆಯಲ್ಲಿಯೇ ಫಲಾಹಾರವಾಗಬೇಕೆಂದು ಆಗ್ರಹ ಮಾಡಿದ್ದರಿಂದ ಎಲ್ಲರೂ ದೇಸಾಯರ ಮನೆಗೆ ಹೋದರು. ಗೋಪಾಲನು ಮಾತ್ರ ಮನೆಯಲ್ಲಿಯೇ ಉಳಿದನು. ಅವನಿಗೆ ಆಮಂತ್ರಣವೂ ಇರಲಿಲ್ಲ. ಗೋಪಾಲನಿಗೆ ಅಡಿಗೆ ಮಾಡಿ

ಹಾಕುವದಕ್ಕಾಗಿ ಚಂದ್ರಾಬಾಯಿ ಸರಸೂಗೆ ಹೇಳಿದಳು. "ಯಾರು ಕರೆಯಲಿಕ್ಕೆ ಬಂದರೂ ನೀನು ಮಾತ್ರ ಅಮಂಗಳ ಮೋರೆಯಿಂದ ಅವರ ಹಂದರದಲ್ಲಿ ಕಾಲಿಕ್ಕಕೂಡದು." ಎಂದು ಕಟ್ಟಪ್ಪಣೆಯಾಯಿತು.

ಗದುಗು ಗೋಪಾಲನೂರು. ಗೋಪಾಲನು ಚಿಕ್ಕವನಿರುವಾಗಲೇ ಅವನ ತಂದೆ ಸ್ವರ್ಗಸ್ಥರಾಗಿದ್ದರು. ತಾಯಿಯೊಬ್ಬಳೇ ಮನೆಯಲ್ಲಿ. ಪಿತ್ರಾರ್ಜಿತ ಆಸ್ತಿಯೇನೂ ಇರಲಿಲ್ಲ. ತಂದೆ ಬ್ಯಾಂಕಿನಲ್ಲಿ ಕೆಲವು ರೂಪಾಯಿಗಳನ್ನು ಮಾತ್ರ ಇಟ್ಟಿದ್ದನು. ತಿಂಗಳೊಂದಕ್ಕೆ ಏಳೆಂಟು ರೂಪಾಯಿ ಬಡ್ಡಿ ಬರುತ್ತಿದ್ದಿತು. ಆ ಬಡ್ಡಿಯ ಹಣಕ್ಕೂ ತಾಯಿಯ ಉಪಜೀವನಕ್ಕೂ ಮೇಳ ಮಾಡಿ ಗೋಪಾಲ ಬೊಂಬಾಯಿಗೆ ಹೋಗಿ ಬಿಟ್ಟಿದ್ದನು ಎಂ. ಎ. ಪಾಸಾಗಿ ಈಗ ಮರಳಿ ಊರಿಗೆ ಬರುತ್ತಿದ್ದುದು. ಬಡತನದ ಸ್ಥಿತಿಯಲ್ಲಿ ಬೊಂಬಾಯಿಯಿಂದ ಗದುಗಿನ ವರೆಗೆ ಬರುವದಾದರೂ ಎಂತು? ಚಟುವಟಿಕೆಯುಳ್ಳ ಹುಡುಗ. ನಾಲ್ಕು ಜನರನ್ನು ಹಚ್ಚಿಕೊಂಡು ಬೊಂಬಾಯಿಯಲ್ಲೇ ಕಲಿಯುತ್ತಿದ್ದ. ತಾಯಿಯೇ ಒಂದು ಸಲ ಹಾಗೂ ಹೀಗೂ ಮಾಡಿ ಅಲ್ಲಿಯ ವರೆಗೆ ಹೋಗಿ ಮಗನನ್ನು ಕಂಡು ಬಂದಿದ್ದಳು ಈಗಲಾದರೂ ಗೋಪಾಲನಿಗೆ ಬರುವ ಇಷ್ಟವಿರಲಿಲ್ಲ. ಗದುಗಿನ ಇಂಗ್ಲೀಷ ಶಾಲೆಯ ಹೆಡ್ ಮಾಸ್ತರರು ಶಾಲೆಯ ಕೆಲಸಕ್ಕಾಗಿ ಅವಶ್ಯವಾಗಿ ಬರಬೇಕೆಂದು ಹೇಳಿದುದರಿಂದ ಬಂದನು. ಎಲ್ಲ ಕೆಲಸಗಳಿಗಿಂತಲೂ ಶಾಲಾ ಗುರು ಆಗುವದು ಗೋಪಾಲನಿಗೆ ಬಹಳ ಸೇರುತ್ತಿದ್ದಿತು. ಸತ್ಕಾರ್ಯಗಳಿಗೆಲ್ಲ ಮೂಲಾಧಾರವು ವಿದ್ಯೆಯಲ್ಲವೆ? ಚಿಕ್ಕ ಮಕ್ಕಳಿಗೆ ತನ್ನ ಕೈಲಾದ ಮಟ್ಟಿಗೆ ಒಳ್ಳೇ ಶಿಕ್ಷಣವನ್ನು ಕೊಟ್ಟು ಭಾರತದ ಆಧಾರಸ್ತಂಭರನ್ನಾಗಿ ಮಾಡಬೇಕೆಂದು ಅವನಿಗೆ ಎಂದಿನಿಂದಲೂ ಲವಲವಿಕೆ. ಹಾಯಸ್ಕೂಲಿನವರ ಕರೆ ಬರುವದೊಂದೇ ತಡ. ಎಲೆಲ್. ಬಿ. ಗೆ ಕೂಡ್ರುವ ಹವ್ಯಾಸವನ್ನು ತೊರೆದು ಹೊರಟು ಬಂದ ಬೊಂಬಾಯಿಯಲ್ಲಿ ಟ್ರೇನು ಹತ್ತುವಾಗಲೇ ಅವನಿಗೆ ಶ್ಯಾಮನ ಗಂಟು ಬಿದ್ದಿತು. ಶ್ಯಾಮ–ಗೋಪಾಲರು ಕಾಲೇಜಿನ ಗೆಳೆಯರು. ಒಂದೇ ಊರವರಾದುದರಿಂದ ಕಾಲೇಜಿನಲ್ಲಿ ಸ್ವಲ್ಪ ಹೆಚ್ಚು ಪರಿಚಯವಾಗಲು ಕಾರಣ.

ಆದೆಷ್ಟೋ ವೇಳೆ ಗೋಪಾಲನು ಮಾತ್ರ ಮನದಲ್ಲಿಯೇ ನೊಂದು ಕೊಳ್ಳತೊಡಗಿದನು. ಸುಮ್ಮನಿರುವದಾಗಲಿಲ್ಲ. ಅವಳೇನು ಸಂಕಟ ತಂದುಕೊಳ್ಳುವಳೋ ಎಂಬ ಭಯದಿಂದ ಅಲ್ಲಿದ್ದ ಕಳ್ಳದಾರಿಯಿಂದ ಹಿತ್ತಲಕ್ಕೆ ಹೋದನು. ಆವನು ಹಿತ್ತಲಕ್ಕೆ ಬರುವಷ್ಟರಲ್ಲಿಯೇ ಧುಡುಂ ಎಂಬ ಶಬ್ದ ಕೇಳಿಸಿತು. ಬಾವಿಯ ಬಳಿ ಓಡಿದನು. ಹೃದಯದ್ರಾವಕ ನೋಟವನ್ನು ಕಂಡು ಎದೆ ದಡದಡ ಎನ್ನಹತ್ತಿತು. ತುಂಬಾ ವ್ಯಥೆಯಾಯಿತು. ಸರಸೂ ತನ್ನ ಸೀರೆ ಬಿಚ್ಚಿ ಬಾವಿಯ ಗಡಗಡೆಗೆ ಕಟ್ಟಿದ್ದಳು. ಆದರ ಗುಂಟ ಇಳಿಯುಹೋಗಿ ಕೈ ಜಾರಿ ತೇನೋ ಬಿದ್ದುಬಿಟ್ಟಳು. ಬಾವಿಯೇನೂ ಆಳವಾದದ್ದಿರಲಿಲ್ಲ. ಗೋಪಾಲನು ವಿಚಾರ ಮಾಡುತ್ತ ನಿಲ್ಲದೆ ಒಮ್ಮೆಲೆ ಬಾವಿಯಲ್ಲಿ ಜಿಗಿದು ಆವಳನ್ನು ಗಟ್ಟಿಯಾಗಿ ಹಿಡಿದು ಮೇಲಕ್ಕೆತ್ತಿದ. ಸೀರೆಯ ಆಸರದಿಂದ ಇಬ್ಬರೂ ಮೇಲೆ ಬಂದರು. ಲಜ್ಜಾಗ್ರಸ್ತಳಾಗಿ ಲಗುಬಗೆಯಿಂದ ಅವಳು ಸೀರೆಯುಟ್ಟುಕೊಂಡಳು.

"ಹೀಗೆಲ್ಲ ಜೀವಕ್ಕೆ ಎರವಾಗುವ ಕೆಲಸವನ್ನು ಮಾಡಬೇಡಿರಿ" ಎಂದು ಕನಿಕರದಿಂದ ಗೋಪಾಲ ನುಡಿದ.

"ತನ್ನ ಬಾಳುವೆಯ ಬೆಳದಿಂಗಳನ್ನೇ ರಾಹುವು ನುಂಗಿಬಿಟ್ಟಿದ್ದಾನೆ. ನಾನು ಸತ್ತರೇನೂ ತಪ್ಪಾಗುವದಿಲ್ಲ"

"ಛೀ, ಹುಚ್ಚರ ಹಾಗೆ ಮಾಡಬೇಡಿರಿ. ಗ್ರಹಣವು ಕೊನೆಯವರೆಗೂ ಉಳಿಯುವದಿಲ್ಲೆಂಬುವದು ನಿಮಗೆ ಗೊತ್ತಿಲ್ಲವೇ? ಒಳ್ಳೇ ದಿನ ಮತ್ತೆ ಬಂದಾವು" ಗೋಪಾಲ ಅವಳಿಗೆ ಬುದ್ಧಿವಾದವನ್ನು ಹೇಳಿದ.

"ಒಳ್ಳೇ ದಿನಗಳ ಆಶೆಯನ್ನು ಹಿಡಿಯಬೇಕೆನ್ನುವರಾ? ಹಾಗೇ ಆಗಲಿ. ನಿಮ್ಮ ಮಾತನ್ನು ನಂಬಿ ನಿಮ್ಮ ಸಲುವಾಗಿ ನಾನು ಜೀವ ಹಿಡಿದಿರುತ್ತೇನೆ." ಸರಸೂ ಉತ್ತರವನ್ನಿತ್ತಳು. ಗೋಪಾಲನು ಅಷ್ಟಕ್ಕೆ ಬಿಡುವನೇ ಭೂಪ! ಕೈ ಮೇಲೆ ಕೈ ಹಾಕಿಕೊಂಡು ಅವಳಿಂದ ವಚನವನ್ನು ತೆಗೆದುಕೊಂಡ. ತಾನು ಕೊಡವನ್ನು ತೆಗೆದ ಸಂಗತಿಯನ್ನು ಯಾರಿಗೂ ತಿಳಿಸಕೂಡದೆಂದು ಹೇಳಿ ಬಂದ ದಾರಿಯಿಂದಲೇ ಹೋಗಿ ತನ್ನ ಒದ್ದೆ ಬಟ್ಟೆ ಒಣಹಾಕಿ ಮಲಗಿಕೊಂಡ.

ಕುಸು ಹೊತ್ತಿನಲ್ಲಿಯೇ ಮತ್ತೊಂದು ಸಂಗತಿ ಸಂಭವಿಸಿತು.

"ಕಳ್ಳರು! ಕಳ್ಳರು! ಬೇಗಬನ್ನಿರಿ!" ಎಂದು ಕೂಗುತ್ತ ಸರಸೂ ಅಂಗಳಕ್ಕೆ ಬಂದಳು. 'ಎಲ್ಲಿ ಎಲ್ಲಿ' ಅನ್ನುತ್ತ ಎಲ್ಲರೂ ಅತ್ತಿಂದಿತ್ತ ಓಡಾಡತೊಡಗಿದರು. ಸರಸೂ ಹಿತ್ತಲ ಕಡೆಗೆ ಕೈಮಾಡಿ ತೋರಿಸಿದಳು ಗೋಪಾಲನು ಕೂಡಲೆ ಅತ್ತಕಡೆಗೆ ಓಡಿದ. ದೂರದಲ್ಲಿ ಯಾವನೋ ಓಡುವಂತೆ ಕಂಡಿತು. ಬೆನ್ನಟ್ಟಿದ. ಆ ವ್ಯಕ್ತಿಯಾದರೂ ಬಂಗಾರದ ಚಿಗರಿಯ ವೇಷದಲ್ಲಿ ಮಾರೀಚನು ರಾಮನನ್ನು ಓಡಿಸಿಕೊಂಡು ಹೋದಂತೆ ಗೋಪಾಲನಿಗೆ ಆಶೆ ಹಚ್ಚಿ ಹಚ್ಚಿ ದಾ. ಒಯ್ದು ಒಂದು ಬದಿ ನಿಂತುಕೊಂಡಿತು. ಗೋಪಾಲನು ಓಡಿ ಹಿಡಿಯ ಹೋದನು.

"ನಾನೇನೂ ಓಡಿ ಹೋಗುವದಿಲ್ಲ ನಿಲ್ಲು" ಎಂದಿತಾ ವ್ಯಕ್ತಿ.

ತೇಜಃಪುಂಜವಾದ ಆ ವ್ಯಕ್ತಿಯನ್ನು ಕಂಡೊಡನೆ ಗೋಪಾಲನಿಗಾದರೂ ಹಿಡಿಯುವ ಮನಸ್ಸಾಗಲಿಲ್ಲ.

"ಸ್ವಾಮೀ, ತಾವು ಸನ್ಯಾಸಿಗಳಂತೆ ಕಾಣುತ್ತೀರಿ ತಾವು ಯಾರು? ತಮ್ಮ ಊರು ಯಾವದು?" ಗೋಪಾಲ ವಿನಯದಿಂದ ಕೇಳಿದ.

"ತಮ್ಮಾ, ನಾನು ಯಾರಿದ್ದು ಏನು ಪ್ರಯೋಜನ? ಒಬ್ಬ ಸನ್ಯಾಸಿ. ಸನ್ಯಾಸಿಗಳಿಗೆ ನಿಂತದ್ದೇ ಊರು. ಕುಳಿತದ್ದೇ ಮನೆ. ನೀನಾರೆಂಬುದನ್ನಷ್ಟು ಹೇಳುವಿಯಾ?"

"ನಾನು ಗದಗ ಬೆಟಗೇರಿಯ ಗೋಪಾಲ. ಈಗ ತಾನೇ ಎಂ. ಎ. ಪಾಸಾಗಿ ಊರಿಗೆ ಹೋಗುವದಕ್ಕಾಗಿ ಬಂದಿದ್ದೇನೆ." ಎಂದು ನುಡಿದ ಗೋಪಾಲ.

ದೊಡ್ಡವನಾದ ಮೇಲೆ ಗೋಪಾಲನನ್ನು ಆ ಸನ್ಯಾಸಿಯು ನೋಡಿರದಿದ್ದರೂ ಗೋಪಾಲನ ವಿಷಯವಾಗಿ ಎಲ್ಲವೂ ಅವನಿಗೆ ತಿಳಿದೇ ಇತ್ತು. ಅವರ ಮನೆತನದವರೆಲ್ಲರೂ ಸನ್ಯಾಸಿಗೆ ಪರಿಚಿತರೇ ಇದ್ದರು.

"ಗೋಪಾಲ. ನಿನ್ನ ತಾಯಿ ಭಾಗಿರಥಿಬಾಯಿ ಸೌಖ್ಯವಾಗಿದ್ದಾಳೆ. ನಿನ್ನ ಬರುವಿಕೆಯನ್ನೇ ನಿರೀಕ್ಷಿಸುತ್ತಿರುವಳಂತೆ. ಮೊನ್ನೆ

ತಾನೇ ನಾನು ಆವಳನ್ನು ಹಳ್ಳದ ದಂಡೆಯ ಮೇಲೆ ಕಂಡೆ' ಎಂದು ನುಡಿದು ಸನ್ಯಾಸಿಯು ಕೊನೆಗೆ ಗೋಪಾಲನಿಂದ ಸರಸೂನ ವಿಷಯವಾಗಿ ಆದೆಷ್ಟೊ ವಿಷಯ ತಿಳಿದುಕೊಂಡ. ಗೋಪಾಲನಾದರೂ ಸುಮ್ಮನುಳಿಯಲಿಲ್ಲ. ಆ ಸನ್ಯಾಸಿಯ ಆತ್ಮಕತೆಯನ್ನು ಕೇಳಿಯೇ ಬಿಟ್ಟ. ಆದರೆ ಸದ್ಯಕ್ಕೆ ಯಾರಿಗೂ ಹೇಳಕೂಡದೆಂಬ ಬಂಧನವು ಮಾತ್ರ ಅವನಿಗುಂಟು.

''ಸರಸೂನನ್ನು ಬಾವಿಯಿಂದ ತೆಗೆದವನು ನೀನೇ ಅಲ್ಲವೆ? ಗೋಪಾಲ ನೀನು ಧನ್ಯನು'' ಸನ್ಯಾಸಿಯು ಆತನ ಬೆನ್ನು ಚಪ್ಪರಿಸುತ್ತ ನುಡಿದನು

"ಇಷ್ಟು ಮಾತ್ರಕ್ಕೆ ಧನ್ಯನಾಗುವದು ಶಕ್ಯವಿಲ್ಲ. ಗೋಳಾಟದ ಕಡಲಿನಿಂದ ಶಾಶ್ವತವಾಗಿ ಆವಳನ್ನು ಮೇಲಕ್ಕೆತ್ತುವವನೇ ಧನ್ಯನು. ಗಂಭೀರವಾಗಿ ಗೋಪಾಲನು ನುಡಿದ

"ಆ ಕಾರ್ಯವಾದರೂ ನಿನ್ನಂಥ ವೀರನಿಂದಲೇ ಸಾಧ್ಯವುಂಟು.'' ಸನ್ಯಾಸಿಯು ತನ್ನ ಮಾತನ್ನು ಮುಗಿಸಿ ತನ್ನಲ್ಲಿದ್ದಂತಹ ಎರಡು ಜ್ವರ ಸಂಜೀವಿನೀ ಗುಟಿಕೆಗಳನ್ನು ಗೋಪಾಲನ ಕೈಯಲ್ಲಿ ಕೊಟ್ಟು ಸರಸೂಗೆ ಕೊಡಲಿಕ್ಕೆ ಹೇಳಿದ ಗದುಗಿಗೆ ಬಂದಬಳಿಕ ಆಗಾಗ್ಗೆ ವೀರನಾರಾಯಣನ ಗುಡಿಯಲ್ಲಿ ಕಾಣುವದಕ್ಕೆ ಅರಿಕೆ ಮಾಡಿಕೊಂಡು ಹೊರಟು ಹೋದ. ಗೋಪಾಲನು ಮನೆಗೆ ಬಂದು ತಲುಪಿದ. ಎಷ್ಟು ಹುಡುಕಿದರೂ ಕಳ್ಳರು ಸಿಕ್ಕಲಿಲ್ಲವೆಂದು ಹೇಳಿದ. ಕಳ್ಳರು ಬಂದದ್ದೆ ಸುಳ್ಳೆಂದು ಚಂದ್ರಾಬಾಯಿ ಸಾಧಿಸಹತ್ತಿದಳು ಮತ್ತೆ ಸರಸೂನ ಮೇಲೆ ಬೈಗಳ ವೃಷ್ಟಿಯನ್ನು ಕರೆದಳು. ಗೋಪಾಲನು ತುಂಬಾ ಕಳವಳ ಪಡುತ್ತಿದ್ದನು ಎರಡು ದಿನಗಳನ್ನು ಅಲ್ಲಿ ಕಳೆಯುವದೆಂದರೆ ಹೇಗೋ ಆಗಿ ಹೋಗಿದ್ದಿತು.

ರಾತ್ರಿಯಲ್ಲಿ ಚಳಿಯಲ್ಲಿ ಕೆಲಸ ಮಾಡಿದ್ದರಿಂದಲೋ ಏನೋ ಮರುದಿವಸ ಸರಸೂಗೆ ಮತ್ತೆ ಚಳಿ ಬಂದವು. ಸನ್ಯಾಸಿಯು ಕೊಟ್ಟ ಗುಟಿಕೆಗಳನ್ನು ಗೋಪಾಲನು ಚಂದ್ರಾಬಾಯಿಯವರ ಕೈಗೆ ಕೊಟ್ಟು ಸೊಸೆಗೆ ಕೊಡಹೇಳಿದ.

"ಇದರಿಂದೇನಾಗಬೇಕು ? ಅವಳ ಹಣೇಬರಹವೇ ಕೆಟ್ಟದ್ದಾಗಿದೆ ! ನಮ್ಮವರು ತಯಾರಿಸುವಂಥ ಗುಟಿಕೆಗಳನ್ನು ಯಾರು ತಯಾರಿಸುವದೂ ಸಾಧ್ಯವಿದ್ದಿಲ್ಲ. ಪ್ರಸಿದ್ಧ ವೈದ್ಯರಿದ್ದರು ಅವರು. ಮಹಾರಾಯಳ ಕಾಲ್ಗುಣ ! ಇವಳು ಮನೆಗೆ ಕಾಲಿಕ್ಕಿದ್ದೇ ತಡ ; ಯಾತ್ರೆಗೆಂದು ಹೋದವರು ಮಾಯವಾಗಿಯೇ ಬಿಟ್ಟರು " ಚಂದ್ರಾಬಾಯಿ ತನ್ನ ಕಂತೆ ಪುರಾಣವನ್ನು ಬಿಚ್ಚಿದಳು.

'ಪಾಪ ! ಅವರದೇನು ತಪ್ಪು ! ಇದರಲ್ಲೆಂಥ ಕಾಲ್ಗುಣ ! ಇವೆಲ್ಲ ನಮ್ಮ ಪೂರ್ವಿಕರ ಭ್ರಮೆ ! ಹುಚ್ಚು ತಿಳುವಳಿಕೆ !" ಎಂದು ಸಾರಿ ಹೇಳಿದ ಗೋಪಾಲ.

ರವಿವಾರ ಬಂದಿತು. ಬೇಸಿಗೆಯ ಬಿಡುವೂ ಮುಗಿಯಿತು. ಮೊದಲೇ ನಿಶ್ಚಯಿಸಿದಂತೆ ಎಲ್ಲರೂ ಗದುಗಿನ ಮೋಟಾರಿನಲ್ಲಿ ಕುಳಿತುಕೊಂಡರು ಪ್ರತಿಷ್ಠಿತರೆಲ್ಲರೂ ಮುಂದು ಮುಂದಾಗಿ ಕುಳಿತರು ಸರಸೂನನ್ನು ಯಾರು ಕೇಳಬೇಕು ? ಒಂದು ಬದಿಗೆ ಕುಳಿತುಕೊಂಡಳು ಪ್ರಾಣಿ. ಗೋಪಾಲನಿಗೂ ಅವಳ ಹತ್ತಿರವಲ್ಲಿಯೇ ಸ್ವಲ್ಪ ಅನುವು ದೊರೆಯಿತು ಮೋಟಾರು ಭರ್ರೆಂದು ಸಾಗಿತು

ವೀರನಾರಾಯಣನ ಗುಡಿಯ ಓಣಿಯಲ್ಲಿಯೇ ಶ್ಯಾಮನ ಮನೆ. ಗದುಗಿಗೆ ತಲುಪಿದ ಬಳಿಕ ಗೋಪಾಲನು ಬಾಡಿಗೆ ತೆಗೆದುಕೊಂಡ ಮನೆಯೂ ಶ್ಯಾಮನ ಮನೆಗೆ ಹೊಂದಿಯೇ ಇದ್ದಿತು. ಗೋಪಾಲನು ತನ್ನ ತಾಯಿಯನ್ನೂ ಕರೆಸಿಕೊಂಡು ಇರಹತ್ತಿದ.

ಗೋಪಾಲನ ಕಲಿಸುವ ಪದ್ಧತಿಯು ಒಳ್ಳೇದಾಗಿತ್ತು. ಉಳಿದವರಂತೆ ಸಂಬಳದ ಸಲುವಾಗಿ ಕಾಟಕ್ಕಾಗಿ ಹೋಗಿ ಬಿಟ್ಟೀ ಕೆಲಸ ಮಾಡುವವು ಅವನಿಗೆ ಗೊತ್ತೇ ಇರಲಿಲ್ಲ ಪ್ರಿನ್ಸಿಪಾಲರು ತುಂಬಾ ಮೆಚ್ಚಿದರು. ಇದನ್ನರಿತು ಜಾಹಗೀರದಾರರು ತಮ್ಮ ಸುಶೀಲೆಗೆ ಅಭ್ಯಾಸ ಹೇಳಿಕೊಡುವದಕ್ಕಾಗಿ ಗೋಪಾಲನನ್ನೇ ಕಳಿಸಿಕೊಡಬೇಕೆಂದು ಪ್ರಿನ್ಸಿಪಾಲರಿಗೆ ಬಿನ್ನವಿಸಿಕೊಂಡರು. ಜಾಹಗೀರದಾರರಿಂದ ಅವರ ಶಾಲೆಗೆ ತುಂಬಾ ಸಹಾಯ ಸಿಗುತ್ತಿದ್ದುದರಿಂದ ಪ್ರಿನ್ಸಿಪಾಲರು ಒಪ್ಪಿಕೊಳ್ಳಲೇ ಬೇಕಾಯಿತು. ಸುಶೀಲೆಯ ನಡತೆ, ಸ್ವಭಾವಗಳು

ಎಳ್ಳಷ್ಟೂ ಗೋಪಾಲನಿಗೆ ಸೇರುತ್ತಿರಲಿಲ್ಲ. ಆದರೇನು ಮಾಡುವದು ? ಪ್ರಿನ್ಸಿಪಾಲರ ಮಾತನ್ನು ಮೀರಲಿಕ್ಕೆ ಬರುವದುಂಟೇ ? ಪಾಠ ಹೇಳಿ ಕೊಡಲಿಕ್ಕೆ ಆರಂಭವಾಯಿತು. ಅಂದೇ ಅಸೂಯೆಯೆಂಬ ಬೇಗೆಗೂ ಆಸ್ಪದದೊರೆಯಿತು. ಮೊದಲು ಶ್ಯಾಮನು ಕಲಿಸಲು ಹೋಗುತ್ತಿದ್ದ. ಬೇರೆಯವರು ಕಲಿಸ ಹತ್ತಿದರೆಂದು ಅವನಿಗೇನೂ ದುಃಖವಾಗಲಿಲ್ಲ. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವಲ್ಲ ಎಂದು ಅವನಿಗೆ ವ್ಯಥೆ ಯಾಗತೊಡಗಿತು ಪಾಠ ಹೇಳಿಕೊಡುವದು ಬೇಕಾಗಿರಲಿಲ್ಲ. ಅವ ನಿಗೆ ಬೇಕಾಗಿದ್ದುದು ಅವಳ ಪ್ರೇಮ ಕಟಾಕ್ಷ ! ಪಾಠ ಹೇಳಿಕೊಡುವ ನೆವ ಉಳಿಯದ ಮೇಲೆ ನಿತ್ಯವೂ ಅವರ ಮನೆಗೆ ಹೋಗುವದಕ್ಕೆ ಕಾರ ಣವನ್ನೆಲ್ಲಿಂದ ತರಬೇಕು ? ಆದಕ್ಕಾಗಿ ಗೋಪಾಲನ ಬಗ್ಗೆ ಅಷ್ಟೊಂದು ಮತ್ಸರ. ಕಾಲುಕೆದರಿ ಜಗಳ ಹೂಡುವದಕ್ಕೆ ಆರಂಭ ಮಾಡಿದ. ನಿರ್ಮಲ ಮನಸ್ಸಿನ ಗೋಪಾಲನಿಗೆ ಹಿಂದಿನಿಂದ ಇವೆಲ್ಲ ಸಂಗತಿ ಗೊತ್ತಾದುದು. ಮಾಡಬೇಕೇನು ? ಸುಮ್ಮನೆ ಇದ್ದು ಬಿಟ್ಟ.

ಇಷ್ಟು ದಿನಗಳ ವರೆಗೆ ಗೋಪಾಲನು ಶ್ಯಾಮನ ಸ್ನೇಹ ಸಂಬಂಧ ದಿಂದ ಸಕಾರಣ ಮಕಾರಣವಾಗಿ ಅವರ ಮನೆಗೆ ಹೋಗಿ ಒರುತ್ತಲೇ ಇದ್ದ.

"ಶ್ಯಾಮಾ ವಿಧವೆಯಾದರೇನಾಯಿತು. ನಾಲ್ಕನೆ ಇಯತ್ತೆಯ ವರೆಗೆ ಓದಿದವಳಿದ್ದಾಳೆ. ನಿಮ್ಮತ್ತಿಗೆಗೆ ಹೆಚ್ಚಿನ ಶಿಕ್ಷಣ ಕೊಡಬಾರ ದೇನು ? ಶಾಲೆಗೆ ಕಳಿಸುವದು ನಿಮ್ಮಿಂದ ಶಕ್ಯವಿಲ್ಲೇನೋ ನಿಜ. ಆದರೆ ಮನೆಯಲ್ಲಾದರೂ ಒಂದು ತಾಸು ಕಲಿಸಬಾರದೇ ?" ಎಂದು ಒಂದು ಸಲ ಗೋಪಾಲನು ಒಳ್ಳೇ ಜೋರಾಗಿ ನುಡಿದಿದ್ದ.

"ನನಗೆ ನೂರಾ ಎಂಟು ಕೆಲಸದಲ್ಲಿ ಸಾಧ್ಯವಾಗಿಲ್ಲ. ದಯವಿಟ್ಟು ನೀನೇ ಬಂದು ಕಲಿಸಬಾರದೇ" ಎಂದು ತನ್ನ ತಪ್ಪನ್ನು ಬಚ್ಚಿಟ್ಟು ಕೊಳ್ಳುವ ಉಪಾಯದಿಂದ ಶ್ಯಾಮನು ಉತ್ತರ ಕೊಟ್ಟ. ಅಂದಿನಿಂದ ಗೋಪಾಲ ಸರಸೂಗೆ ಅಭ್ಯಾಸ ಹೇಳಿ ಕೊಡುತ್ತಲೆ ಇದ್ದ. ಶ್ಯಾಮನ ಒತ್ತಾಯಕ್ಕಾಗಿ ಅತ್ತೆ ಹೇಗೋ ಸುಮ್ಮನಿರುತ್ತಿದ್ದಳು. ಇವರ ಮುಂದು ಗಡೆ ಸುಮ್ಮನಿರುತ್ತಿದ್ದರೂ ಹಿಂದಿನಿಂದ ಬಟ್ಟು ಮುರಿದು ಮುರಿದು

ಕೈ ನೋಯಿಸಿಕೊಳ್ಳದೆ ಅವಳೇನೂ ಬಿಟ್ಟಿಲ್ಲ. ಆ ಉಸಾಬರಿಯೇಕೆ ನಮಗೆ? ನಾವೇನೂ ಎಣ್ಣೆ ಹಚ್ಚಿ ಕೈ ತಿಕ್ಕಬೇಕಾಗಿಲ್ಲವಷ್ಟೇ? ಗೋಪಾಲನನ್ನು ತಮ್ಮ ಮನೆಗೆ ಬರಗೊಡಬಾರದೆಂದು ಶ್ಯಾಮನೀಗ ಯೋಚಿಸತೊಡಗಿದ. ಮನಃಪೂರ್ವಕವಾಗಿಯೇ ಗೋಪಾಲನು ಜಾಹಗೀರದಾರರ ಮನೆಗೆ ಹೋಗುತ್ತಿರುವನೆಂದು ಶ್ಯಾಮನ ತಿಳುವಳಿಕೆ. ಉಪಾಯಾಂತರವಾಗಿ ಗೋಪಾಲನು ತಮ್ಮ ಮನೆಗೆ ಬರದಂತೆ ಮಾಡಬೇಕೆಂದು ತನ್ನ ತಾಯಿಗೆ ಹೇಳಿದ. ಇನ್ನೇನು ಕೇಳುವದಿದೆ? ಸೊಸೆಯ ಮೇಲೆ ಹೊಸ ಗದೆ! ಚಂದ್ರಾಬಾಯಿಯವರಿಗೇನು ಉಪಾಯ ಕಲಿಸಿ ಕೊಡಬೇಕೇ?

ಮರುದಿನ ಗೋಪಾಲನು ಎಂದಿನಂತೆ ಸರಸೂನ ಮನೆಗೆ ಬಂದ. ಶ್ಯಾಮನಿರಲಿಲ್ಲ. ಚಂದ್ರಾಬಾಯಿಯೂ ಎಲ್ಲಿಯೋ ಹೋಗಿದ್ದಳು. ಸರಸೂ ಮಾತ್ರ ಒಬ್ಬಳೇ ಹೊರಗಿನ ಕೋಣೆಯಲ್ಲಿ ಕುಳಿತುಕೊಂಡಿದ್ದಳು. ಕಣ್ಣೀರಿನ ಹಳ್ಳಕ್ಕೆ ನೆರೆ ಬಂದಿತ್ತು. ತನ್ನ ಗಂಡನ ಜೀವವನ್ನು ಹರಣ ಮಾಡಿದ ಯಮದೂತರನ್ನು ಶಪಿಸುತ್ತಿದ್ದಳು. ಕುಂಕುಮವನ್ನು ಕದ್ದೊಯ್ದು ಅಮಂಗಳವನ್ನಾಗಿ ಮಾಡಿದ ಕಳ್ಳರನ್ನು ಬೈಯ್ಯುತ್ತಿದ್ದಳು ದುಃಖವೆಂಬ ಕಾರ್ಗತ್ತಲೆಯಲ್ಲಿ ಸಿಲ್ಕಿದ ಅವಳಿಗೆ ಹೊರಗೆ ಗೋಪಾಲನು ಬಂದು ನಿಂತಿದ್ದರ ಅರಿವು ಕೂಡ ಇರಲಿಲ್ಲ. "ದೇವಾ, ನಿರ್ದಯರಾದ ಕುಂಕುಮಗಳ್ಳರು ಸಂಸಾರದ ಹೊಸ್ತಿಲನ್ನು ಕೂಡ ದಾಟದ ಮುಂಚೆಯೇ ನನ್ನ ಕುಂಕುಮವನ್ನು ಕದ್ದೊಯ್ದರು. ಇನ್ನು ಕೇಶಮುಂಡನವನ್ನೊಂದು ಮಾಡಿ ಕುರೂಪಿಯನ್ನಾಗಿ ಮಾಡಬೇಕೆನ್ನುತ್ತಿದ್ದಾರೆ. ನೀನಾದರೂ ಈ ವಿಧವಾ ಕುಮಾರಿಯನ್ನು ರಕ್ಷಿಸಬಾರದೇ?" ಎಂದು ಭಕ್ತಿಪೂರ್ವಕವಾಗಿ ಅಲ್ಲಿದ್ದ ಕೃಷ್ಣನ ಪಟದ ಮುಂದೆ ಮೊರೆಯಿಟ್ಟಳು.

"ಕರುಣಾಕರ ನಿನಗೆಂಬುವದ್ಯಾಕೋ ಭರವಸವಿಲ್ಲೆನಗೆ" ಎಂಬ ದಾಸರಾಯರ ಪದವನ್ನು ಮಂಜುಲವಾದ ಕಂಠದಿಂದ ಮೃದುಮಧುರವಾಗಿ ಹಾಡತೊಡಗಿದಳು. ಹೊರಗಿನಿಂದಲೇ ಹುಚ್ಚನಂತೆ ಇದೆಲ್ಲವನ್ನೂ ನೋಡುತ್ತ ನಿಂತುಕೊಂಡ ಗೋಪಾಲನಿಗೆ ಏನೆನ್ನಿಸಿತೋ

ದೇವರ ಕೋಣೆಯಲ್ಲಿ ಹೋಗಿ ಸದ್ದಿಲ್ಲದಂತೆ ಒಂದು ಚಿಮಟಿಯಲ್ಲಿ ಸ್ವಲ್ಪ ಕುಂಕುಮ ತೆಗೆದುಕೊಂಡು ಸರಸೂನ ಹಿಂದುಗಡೆ ಬಂದು ನಿಂತನು. ಆವಳ ಪದವನ್ನೆಲ್ಲ ಪೂರ್ತಿಯಾಗಿ ಕೇಳಿದನು. ಸರಸೂ ಹಿಂತಿರುಗಿ ನೋಡುತ್ತಾಳೆ ಗೋಪಾಲ. ಬೆಚ್ಚಿಬಿದ್ದಳು. ಲಜ್ಜಾತುರ ಳಾದಳು

"ಸರಸೂ ಚಿಂತಿಸಬೇಡ. ಮೊದಲಿನ ಕಳ್ಳರು ಅಮಂಗಲವನ್ನುಂಟು ಮಾಡಲು ಕುಂಕುಮವನ್ನು ಕದ್ದೊಯ್ದರೆ ಈ ಕಳ್ಳನು ಮಂಗಲವನ್ನುಂಟುಮಾಡುವದಕ್ಕೆ ಕುಂಕುಮವನ್ನು ಕದ್ದು ತಂದಿದ್ದಾನೆ ಎಂದು ಹೇಳಿ ಆವಳ ಹಣೆಯ ಮೇಲೆ ತಟ್ಟನೆ ಕುಂಕುಮದ ಬೊಟ್ಟಿಕ್ಕಿದನು.

"ಗೋಪಾಲ, ನಮ್ಮ ನಿಮ್ಮ……" ಹೇಳ ಹೇಳುವಷ್ಟರಲ್ಲಿಯೇ ಕುತ್ತಿಗೆ ಬಿಗಿದು ಬಂದಿತು.

"ನೀವು ನಮ್ಮ ಮನೆಗೆ ಬರಬಾರದೆಂದು ಅತ್ತೆಯವರು ಆಟ ಹೂಡಿದ್ದಾರೆ. ನನ್ನ ಪುಸ್ತಕಗಳೆಲ್ಲವೂ ಅಗ್ನಿನಾರಾಯಣನಿಗೆ ಆಹುತಿಯಾದವು'' ಅಳತೊಡಗಿದಳು

"ಆಗಲಿ. ಇದಕ್ಕೆ ಉಪಾಯ ಹುಡುಕೋಣ" ಗೋಪಾಲನು ನುಡಿಯುವಷ್ಟರಲ್ಲಿಯೇ "ಇಷ್ಟೇ ಅಲ್ಲ. ಬರುವ ಸೋಮವಾರವೇನೋ ನನ್ನನ್ನು ಮಡಿ ಮಾಡುವರಂತೆ'' ಎಂದು ಹೇಳಿ ಸರಸೂ ಮತ್ತಷ್ಟು ಅಳತೊಡಗಿದಳು. ಆಯ್ಯೋ! ಈ ವಿಧವಾ ಕುಮಾರಿಯ ಕೂದಲವನ್ನು ಕಿತ್ತೊಗೆಯಬೇಕೆನ್ನುವರೋ. ಪರಮಾತ್ಮನಿಂದ ಸ್ವಾಭಾವಿಕವಾಗಿ ನಿರ್ಮಿತವಾದ ಈ ಕೂದಲುಗಳನ್ನು ಕಿತ್ತೊಗೆದರೆ ಮಡಿಯಾಗುವದಂತೆ! ಈ ಹಾಳು ರೂಢಿಗೆ ಏನೆನ್ನಬೇಕು. ಇಂಥ ಅಮಂಗಳ ಕೃತ್ಯವನ್ನು ಶೋಧ ಮಾಡಿದ ಶಾಸ್ತ್ರಕಾರನು ಖಂಡಿತವಾಗಿಯೂ ಶುಭಮುಹೂರ್ತದಲ್ಲಿ ಹುಟ್ಟಿರಲಿಕ್ಕಿಲ್ಲ. "ಸರಸೂ, ಏನೂ ಚಿಂತಿಸಬೇಡ. ನಾನು ಕೈಲಾದ ಮಟ್ಟಿಗೆ ಪ್ರಯತ್ನ ಮಾಡಿ ನಿನ್ನ ಉದ್ಧಾರಕ್ಕಾಗಿ ಯತ್ನಿಸುತ್ತೇನೆ." ಗೋಪಾಲನು ಧೈರ್ಯ ಹೇಳಿದ. ಅಷ್ಟು ಮಾತ್ರಕ್ಕೆ ಆವಳಿಗೆ ಸಮಾಧಾನವಾಗಲಿಲ್ಲ. ಗೋಪಾಲನಿಂದ ವಚನ

ವನ್ನೇ ತೆಗೆದುಕೊಂಡಳು. ಗೋಪಾಲ ವಚನ ಕೊಟ್ಟು ಮನೆಗೆ ಬಂದ ಸನ್ಯಾಸಿಯು ಬೆಂಬಲದ ಮೇಲಿಂದ ಗೋಪಾಲನಿಗೆ ಧೈರ್ಯ ವಿದ್ದಿತು. ವೀರ ನಾರಾಯಣನ ಗುಡಿಯ ಪೌಳಿಯಲ್ಲಿ ಗುಟ್ಟಾಗಿ ಗೋಪಾಲ ಆಗಾಗ್ಗೆ ಸನ್ಯಾಸಿಯನ್ನು ಕಂಡು ಬರುತ್ತಿದ್ದ.

ಗೋಪಾಲನ ವಿಷಯವಾಗಿ ಶ್ಯಾಮನಲ್ಲಿದ್ದ ಅಸೂಯೆಯ ಬೇಗೆಯು ಒಂದೇಸವನೆ ಹೆಚ್ಚುತ್ತಲೇ ಇದ್ದಿತು. ಕಾಮಾಂಧ ಸುಶೀ ಲೆಯು ಗೋಪಾಲನೊಡನೆ ಏನಾದರೂ ಪತ್ರವ್ಯವಹಾರ ನಡೆಸಬಹು ದೆಂದು ಶ್ಯಾಮನಿಗೆ ಖಾತ್ರಿಯಿದ್ದಿತು. ಅದಕ್ಕಾಗಿ ಜಾಹಗೀರದಾರರ ಮನೆಯ ಮೇಲೆ ಕಾವಲನ್ನೇ ಇಟ್ಟಿದ್ದನು. ಅವರ ಆಳಿಗೆ ಲಂಚದ ಆಶೆ ಹಚ್ಚಿಟ್ಟು, ಸುಶೀಲೆ ಏನಾದರೂ ಓಲೆ ಕೊಟ್ಟರೆ ಮೊದಲು ತನಗೆ ತೋರಿಸುವದಕ್ಕಾಗಿ ಏರ್ಪಾಟು ಮಾಡಿಕೊಂಡಿದ್ದ.

ಸುಶೀಲೆಗೆ ಮೊದಲಿನಿಂದಲೂ ಒಳ್ಳೇ ಶಿಕ್ಷಣ ದೊರೆತಿರಲಿಲ್ಲ. ಅವರ ಮನೆಯ ವಾತಾವರಣವೂ ಚೆನ್ನಾಗಿರಲಿಲ್ಲ. ದುರ್ಜನರ ಸಹ ವಾಸದಲ್ಲಿಯೇ ಅವಳು ಬಳೆದವಳು. ವೇಶ್ಯಾಸ್ತ್ರೀಯರಂಥ ಸ್ವಭಾವ. ಗೋಪಾಲನನ್ನು ತನ್ನ ಮೋಹಜಾಲದಲ್ಲಿ ಶಿಲುಕಿಸಬೇಕೆಂದು ಅನೇಕ ಯತ್ನ ಮಾಡಿದ್ದಳು ಆದರೆ ಸಜ್ಜನನಾದ ಗೋಪಾಲನು ಮರುಳಾ ಗುವನೇ ? ಇಂದು ರವಿವಾರ ಶಾಲೆಗೆ ಬಿಡುವಿದ್ದಿತು. ಓಲೆಯನ್ನಾ ದರೂ ಬರೆಯೋಣವೆಂದು ಸುಶೀಲೆಗೆ ಎನಿಸಿತು. ಒಂದು ಓಲೆ ಬರೆದು ಗೋಪಾಲನಿಗೆ ಮುಟ್ಟಿಸುವದಕ್ಕಾಗಿ ತನ್ನ ಆಳಿನ ಕೈಯಲ್ಲಿ ಕೊಟ್ಟಳು. ಆಳು ಆ ಓಲೆಯನ್ನು ಶ್ಯಾಮನಿಗೆ ತಂದು ತೋರಿಸಿದ ಬೇಟೆ ಸಿಕ್ಕಿ ತೆಂದು ಶ್ಯಾಮನಿಗೆ ಮಿತಿಮೀರಿದ ಸಂತೋಷ. ಜಾಹಗೀರದಾರರಿಗೆ ಆ ಓಲೆಯನ್ನು ತೋರಿಸಿ ಗೋಪಾಲನ ವಿಷಯವಾಗಿ ತಿರಸ್ಕಾರವನ್ನು ಹುಟ್ಟಿಸಲಿಕ್ಕೇನು ತಡಹಿಡಿಯುತ್ತದೆಯೋ ?

“ ಓಲೆ ತಲುಪಿ ಅಭಿಪ್ರಾಯವಾಯಿತು. ರಾತ್ರಿ ೧೦॥ ಗಂಟೆಗೆ ನಮ್ಮ ಮನೆಯ ಕಡೆಗೆ ಬರಬೇಕು’’ ಎಂದು ಶ್ಯಾಮನೇ ಅದಕ್ಕೆ ಉತ್ತ ರವನ್ನು ಬರೆದು ಸುಶೀಲೆಗೆ ತಲಪುವಂತೆ ಮಾಡಿದ. ಕಾಮವಿಕಾರ

ದಲ್ಲಿ ಲೀನಳಾದ ಸುಶೀಲೆಯು ಸತ್ಯಾಸತ್ಯಗಳನ್ನು ನೋಡದೆ ಆ ಓಲೆಯನ್ನು ನಂಬಿ ಆನಂದದ ಉಬ್ಬಿನಲ್ಲಿ ಮೆರೆಯಹತ್ತಿದಳು.

ರಾತ್ರಿ ೧೦ ಬಡಿದಿರಬಹುದು. ಗೋಪಾಲನು ತನ್ನ ತಾಯಿಯ ಬಳಿಯಲ್ಲಿ ಮಾತನಾಡುತ್ತ ಕುಳಿತುಕೊಂಡಿದ್ದ. ಅಂಜಿಕೆಯ ಉಸುರ್ಗರೆಯುತ್ತ ಸರಸೂ ಒಮ್ಮಿಂದೊಮ್ಮೆ ಓಡಿಬಂದು ಗೋಪಾಲನ ತಾಯಿಯ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು

"ಈ ಬಾಲಿಕೆಯನ್ನು ನಿಮ್ಮ ಉಡಿಯಲ್ಲಿ ಹಾಕಿಕೊಳ್ಳಿರಿ ಇಲ್ಲವಾದರೆ ನಾಳಿನ ದಿವಸವೇ ಕೂದಲು ಮುಂಡನೆ ಮಾಡಿ ಬಿಡುವರು" ಎಂದು ಅಳತೊಡಗಿದಳು. ತಮ್ಮ ಮನೆಯಲ್ಲಿಯೇ ಇಟ್ಟರೆ ಕೆಲಸ ಕೆಡುವದೆಂದು ತಿಳಿದು ಗೋಪಾಲನು ಅವಳನ್ನು ಸನ್ಯಾಸಿಯ ಬಳಿಗೆ ಕರೆದುಕೊಂಡು ನಡೆದ. ಸುಶೀಲೆಯು ತನ್ನ ಓಲೆಗೆ ದೊರೆತ ಉತ್ತರಕ್ಕನುಸಾರವಾಗಿ ಗೋಪಾಲನ ಮನೆಗೆ ಹೊರಟಿದ್ದಳು. ದಾರಿಯಲ್ಲಿಯೇ ಸರಸೂನ ಜೊತೆಗೆ ಹೋಗುತ್ತಿದ್ದ ಗೋಪಾಲನನ್ನು ಕಂಡು ಅವರರಿಯದಂತೆ ಮೆಲ್ಲಗೆ ಹಿಂಬಾಲಿಸಿದಳು. ತನ್ನ ಹಿಂದೊಂದು ಕಾವಲುಗಾರರ ತಂಡ ಬರುವದೆಂಬುದು ಸುಶೀಲೆಗೇನು ಗೊತ್ತು? ಕಾವಲುಗಾರರ ತಂಡವೊ ಹನುಮಂನ ಬಾಲದಂತೆ ಬೆಳೆಯುತ್ತಲೇ ಇದ್ದಿತು. ಶ್ಯಾಮನ ಜೊತೆಗೆ ಜಾಹಗೀರದಾರರು ಬರುತ್ತಿದ್ದರು. ಸರಸೂ ಕಾಣದಂತಾಗಲು ಅವರತ್ತೆಯೂ ಹುಡುಕುತ್ತ ಬಂದಳು. ಗೋಪಾಲನ ಹೊರತು ಬೇರೆ ಯಾರ ಕಡೆಗೂ ಸರಸೂ ಹೋಗುವದು ಶಕ್ಯವಿಲ್ಲೆಂಬುದು ಚಂದ್ರಾಬಾಯಿಗೆ ಗೊತ್ತು.

ಸನ್ಯಾಸಿಯನ್ನು ಕಂಡೊಡನೆ ಸರಸೂ ಸಾಷ್ಟಾಂಗ ನಮಸ್ಕಾರವನ್ನು ಹಾಕಿದಳು. "ಏನೂ ಚಿಂತಿಸಬೇಡ ಮಗೂ. ನಿನ್ನ ಸಲುವಾಗಿಯೇ ನಾನು ಜೀವ ಹಿಡಿದು ಇದ್ದೇನೆ. ಎಂದು ಸನ್ಯಾಸಿಯು ಹೇಳಿದ. ತಮ್ಮ ಮಾವನವರೇ ಸನ್ಯಾಸಿಯ ವೇಷದಲ್ಲಿರಬಹುದೆಂದು ಆಕೆಗೆ ಸಂಶಯ ಬಾರವೆ ಇರಲಿಲ್ಲ. ಸುಶೀಲೆಯು ಗೋಪಾಲನ ದಾರೀ ಕಾಯ್ದು ಕೊಂಡು ಬಾಗಿಲ ಬಳಿ ಮೂಲೆಯಲ್ಲಿ ನಿಂತುಕೊಂಡೇ ಇದ್ದಳು.

ಕಾವಲುಗಾರರ ತಂಡ ಒಳಗೆ ಬಂದಿತು. ಶ್ಯಾಮನು ಮುಂದೆ ಬಂದ. "ಸಂಭಾವಿತನಂತೆ ಸೋಗನ್ನು ಧರಿಸಿ ಸ್ತ್ರೀಯರನ್ನು ಅಪಹರಿಸುವದಕ್ಕೆ ನಿಂತೆಯಾ? ಒಬ್ಬ ಅವಿವಾಹಿತಳನ್ನು ಓಡಿಸಿಕೊಂಡು ಬಂದದ್ದು ಸಾಕಾಗದೆ ಒಬ್ಬ ವಿಧವೆಯನ್ನು ಓಡಿಸಿಕೊಂಡು ಬಂದೆಯಾ" ಸಿಟ್ಟಿನಿಂದ ನುಡಿದ.

"ನಾನು ಯಾರನ್ನೂ ಓಡಿಸಿಕೊಂಡು ಬಂದಿಲ್ಲ" ಗೋಪಾಲ ಮೃದುವಾಗಿ ಹೇಳಿದ.

ಹಾಗಾದರೆ ಸುಶೀಲೆಗೆ ಪತ್ರ ಒರೆದು ಕರೆಸಿಕೊಂಡವರಾರು ಮತ್ತೆ ಗರ್ಜಿಸಿ ಕೇಳಿದ. ಇಷ್ಟು ಹೊತ್ತಿನವರೆಗೆ ಮೌನವಾಗಿದ್ದ ಸನ್ಯಾಸಿಯು ಮುಂದೆ ಬಂದ.

"ಶ್ಯಾಮೂ ಮದಾಂಧತನದಿಂದ ಮನಬಂದಂತೆ ಮಾತನಾಡಬೇಡ ಈ ಸನ್ಯಾಸಿಯು ಯಾರೆಂಬುದನ್ನು ತಿಳಿದುಕೊಂಡು ಮಾತನಾಡು? ಅಶ್ವತ್ಥವೃಕ್ಷದ ಅಡಿಯಲ್ಲಿ ನಿಂತು ಜಾಹಗೀರದಾರರ ಆಳಿನ ಕೈಯಲ್ಲಿ ಗುಟ್ಟಾಗಿ ಓಲೆ ಬರೆದು ಕಳಿಸಿದವನು ನೀನೇ ಅಲ್ಲವೇ? ಅದೇ ಆಳನ್ನೇ ಕೇಳು ನಿನ್ನಂತೆಯೇ ಅವನಿಗೆ ಲಂಚದ ಆಶ ಹಚ್ಚಿ ಪತ್ರವನ್ನಾದರೂ ಓದಿದ್ದೇನೆ. ನೀನು ಮಗನಲ್ಲ ಮಾರಿ ಎಂದು ಅವರ ಜೊತೆಗ ಲಾಂದರವನ್ನು ಹಿಡಿನುಕೊಂಡು ಬಂದ ಆಳಿನ ಕಡೆಗೆ ಕೈ ಮಾಡಿ ತೋರಿಸಿದ. ಆಳುಮನುಷ್ಯನು ಗಡಗಡ ನಡುಗಹತ್ತಿದಾಗಲೆ ಸತ್ಯವು ಹೊರಬಿದ್ದಿತು. ಅಲ್ಲಿ ನಿಂತವರಲ್ಲರೂ ದಂಗು ಬಡೆದು ಕಲ್ಲಿನ ಗಂಬದಂತೆ ನಿಂತುಕೊಂಡರು. ಚಂದ್ರಾಬಾಯಿಯು ಥರಥರ ನಡುಗುತ್ತ ಕೆಳಗೆ ಹಾಕಿದ ಮೋರೆಯನ್ನು ಮೇಲಕ್ಕೆತ್ತಲಿಲ್ಲ.

"ದುಷ್ಟೇ, ನಿನ್ನ ನೀಚತನವನ್ನು ನೋಡಲಾರದೆ ಸನ್ಯಾಸವನ್ನು ತೆಗೆದುಕೊಳ್ಳಬೇಕಾಯಿತು ಸೊಸೆ ಕೈಗೆ ಸಿಕ್ಕಳೆಂದು ಬಿಟ್ಟಿದನದಂತೆ ದುಡಿಸಿಕೊಳ್ಳುವದೆ! ನಿನ್ನ ಮೋರೆಯನ್ನು ಸಹ ನೋಡಬಾರದೆಂದು ಪ್ರತಿಜ್ಞೆ ಮಾಡಿದ್ದ. ಆದರೆ ಸರಸೂ ಪಡುವ ಯಾತನೆಯನ್ನು ಸಹಿಸದೆ ಅವಳ ಸಲುವಾಗಿ ನನ್ನ ಈ ವೇಷವನ್ನು ನಿನಗೆ ತಿಳಿಯಗೊಡಬೇಕಾಯಿತು! ಸನ್ಯಾಸಿ ಸಿಟ್ಟಿನಿಂದ ನುಡಿದ. ಸರಸೂನನ್ನು

ಮುಂದೆ ಕರೆದು ಗೋಪಾಲನ ಕೈಯಲ್ಲಿ ಅವಳ ಕೈಯನ್ನು ಕೊಟ್ಟು "ಗೋಪಾಲ, ಇನ್ನು ಮೇಲೆ ಸರಸೂ ನಿನ್ನವಳೇ. ಬಾವಿಯಿಂದ ತೆಗೆದ ರತ್ನವನ್ನು ನಿನ್ನ ಹೊರತು ಮತ್ತಾರಿಗೆ ಕೊಡಲಿ ?" ಎಂದು ಸನ್ಯಾಸಿ ಹೇಳಿದ. ಜಾಹಗೀರದಾರರನ್ನು ಕರೆದು ತನ್ನ ಮಗನೇ ಅಪರಾಧಿ ಯೆಂದೂ ಗೋಪಾಲನಲ್ಲಿ ಏನೂ ತಪ್ಪಿಲ್ಲೆಂದೂ ಹೇಳಿ ಅವರನ್ನು ಸಮಾಧಾನಪಡಿಸಿ ಮನೆಗೆ ಕಳಿಸಿದ.

"ಶ್ಯಾಮು, ನನ್ನ ಆಸ್ತಿಯನ್ನೆಲ್ಲ ಇಂದಿನಿಂದ ಗೋಪಾಲನಿಗೆ ಬರೆದುಕೊಟ್ಟಿದ್ದೇನೆ. ನಿಮ್ಮದೇನೂ ಹಕ್ಕಿಲ್ಲ ನಡೆಯಿರಿ" ಎಂದು ನಿಷ್ಠುರವಾಗಿ ನುಡಿದು ಸನ್ಯಾಸಿಯು ಎಲ್ಲಿಯೋ ಹೊರಟು ಹೋಗಿ ಬಿಟ್ಟ. ಚಂದ್ರಾಬಾಯಿಯನ್ನು ತಿರುಗಿ ಸಹ ನೋಡಲಿಲ್ಲ.

ಸರಸೂನ ಜೊತೆಗೆ ಸರಸ ಮಾಡುತ್ತ ಗೋಪಾಲನು ತನ್ನ ಮನೆಯ ದಾರೀ ಹಿಡಿದ

"ಕುಂಕುಮಗಳ್ಳನ ಮಾತು ಹುಸಿ ಹೋಯಿತೇ ?" ಎಂದು ನುಡಿದು ಹಿಂದೆ ಅವಳ ಅತ್ತೆಯ ಮನೆಯಲ್ಲಿ ಅವಳು ದುಃಖಿಸುತ್ತಿದ್ದಾಗ್ಗೆ ತಾನು ಕುಂಕುಮವನ್ನು ಕದ್ದುಕೊಂಡು ಬಂದು ಅವಳಿಗೆ ಹಚ್ಚಿದುದನ್ನು ನೆನಪು ಮಾಡಿಕೊಟ್ಟ. ಅವಳಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

"ಹುಸಿ ಹೋಯಿತೆಂದು ಯಾರು ಹೇಳುವರು. ಭರತಖಂಡದಲ್ಲೆಲ್ಲ ನಿಮ್ಮಂಥ ಕುಂಕುಮಗಳ್ಳರ ಬಳಗವು ಬೆಳೆದು ನಮ್ಮಂಥ ವಿಧವಾ ಕುಮಾರಿಯರ ಉದ್ಧಾರವಾಗಲಿ! ಇಷ್ಟೇ ದೇವರಲ್ಲಿ ನನ್ನ ಬೇಡಿಕೆ" ಎಂದು ಅಂತಃಕರುಣಪೂರ್ವಕವಾಗಿ ನುಡಿದಳು ಅಂದಿನಿಂದ ಅವರು ಆನಂದದ ಕಡಲಿನಲ್ಲಿ ತೇಲಾಡಹತ್ತಿದರು.

ಓಂ ಶಾಂತಿಃ ಶಾಂತಿಃ ಶಾಂತಿಃ !!

# ನಾರೀರತ್ನ

ನೂರಾರು ವರ್ಷಗಳ ಹಿಂದಿನ ನಮ್ಮ ಮಹೀಪಟ್ಟಣದ ಮಹಿಮೆಯನ್ನೂ ಬೆಡಗನ್ನೂ ಬಣ್ಣಿಸುತ್ತ ಕುಳಿತರೆ ರಾಮಾಯಣ ಮಹಾಭಾರತಕ್ಕಿಂತಲೂ ಹೆಚ್ಚಿಗೆ ಆಗಬಹುದು ಗಂಡುಗಲಿಗಳೂ, ವಿಶ್ವಾಸಿಕರೂ, ಧರ್ಮಪರಾಯಣರೂ ಆದ ಆಗಿನ ಕಾಲದ ಜನರ ವರ್ಣನೆಯನ್ನು ಇಂಥ ಚಿಕ್ಕ ಪುಸ್ತಕದಲ್ಲಿ ವರ್ಣಿಸುವದಸಾಧ್ಯವು ಇದೆಲ್ಲವನ್ನೂ ಕೇಳಿದರೆ ನಾವು 'ಅಬ್ಬ" ಎಂದೆನ್ನಬಹುದು. ಹುಟ್ಟುಗುರುಡರ ಸ್ಥಿತಿಯು ನಮ್ಮದಾಗಿದೆ. ನಮ್ಮದೇನು ತಪ್ಪು ಇದರಲ್ಲಿ ? ಒಪ್ಪತ್ತಿನ ಗಂಜಿಗೆ ಗತಿಯಿಲ್ಲದ ಸ್ಥಿತಿಯಲ್ಲಿದ್ದ ನಮಗೆ ಬುಟ್ಟಿಗಟ್ಲೆ ಮುತ್ತುರತ್ನಗಳನ್ನು ಬೀದಿಯಲ್ಲಿಟ್ಟುಕೊಂಡು ಮಾರುತ್ತಿದ್ದರೆಂದು ಆ ಕಾಲದ ನಿಜವಾದ ಸಂಗತಿಯನ್ನು ಹೇಳಿದರೂ ಕೂಡ ನಮಗೆ ಅಸತ್ಯವೆಂದೇ ತೋರುತ್ತದೆ. ಸರಿಯಾಗಿ ಕೈಯಲ್ಲಿ ಚಾಕುವನ್ನು ಹಿಡಿಯಲಂಜುವ ನಮಗೆ, ಕತ್ತಿ ಕಠಾರಿಯನ್ನು ತಿರುವುದುರಲ್ಲಿ ಪ್ರಖ್ಯಾತಿಗೊಂಡ ಆ ಕಾಲದ ವೀರರ ಕತೆಗಳನ್ನು ಕೇಳಿದರೆ, ನಮ್ಮ ಮೈ ಜುಂ ಎನ್ನದೇನು ಮಾಡೀತು ?

"ತಿಪ್ಪೆ ಹೋಗಿ ಉಪ್ಪರಿಗೆಯಾಗುವದೂ, ಉಪ್ಪರಿಗೆ ಹೋಗಿ ತಿಪ್ಪಿಯಾಗುವದೂ'' ಜಗತ್ತಿನಲ್ಲಿ ನಡೆದು ಬಂದದ್ದೇ. ಕಾಲಚಕ್ರವು ಬದಲಾಗುತ್ತ ಬಂದಿತು. ಅರಸನ ದುರ್ದೈವವೋ ಜನರ ದುರ್ದೈವವೋ ? ಹದಿನೈದು ವರುಷಗಳಲ್ಲಿಯೇ ಮಹೀಪಟ್ಟಣವು ಹೇಳ ಹೆಸರಿಲ್ಲದಂತಾಯಿತು. ಜನರು ದುಶ್ಚಟಗಳಿಗೆ ಬಿದ್ದರು. ಕಳವು ಸುಲಿಗೆಗಳು ಲೆಕ್ಕವಿಲ್ಲದಷ್ಟಾಗ ಹತ್ತಿದವು. ನೋಡ ನೋಡದಲ್ಲಿ ಒಡಕು ಉತ್ಪನ್ನವಾಯಿತು. ಪ್ರತಿಯೊಬ್ಬರೂ ಸ್ವಾರ್ಥಸಾಧಕರಾದರು. ಶೌರ್ಯವು ಕುಗ್ಗಿತು. ವೀರ್ಯವು ತಗ್ಗಿತು. ಜನರು ಹೇಡಿಗಳಾಗಹತ್ತಿದರು· ಇದೆಲ್ಲಕ್ಕೂ ಕಾರಣೀಭೂತನಾದ ವಿಲಾಸ ಕುಮಾರನನ್ನು ನಮ್ಮ ಕಥಾನಾಯಿಕಿಯಾದ ಕಮಲಾದೇವಿಯು ಹೇಗೆ

ಬಗ್ಗು ಬಡಿದಳೆಂಬುದನ್ನೂ, ಜನರಲ್ಲಿಯ ಹೇಡಿತನವನ್ನೂ, ಒಡಕುತನವನ್ನೂ, ಹೇಗೆ ದೂರ ಮಾಡಿದಳೆಂಬುದನ್ನೂ ವಾಚಕರು ಓದಿ ಅವಳನ್ನು ಹಾಡಿಹರಿಸುವರಲ್ಲವೇ ?

ಶಂಕರರಾಯ ಮಹೀಪಟ್ಟಣದ ದೊರೆ ಇವನ ಹೆಂಡತಿಯ ಹೆಸರು ಪಾರ್ವತೀಬಾಯಿ. ಇವರಿಗೆ ಕಮಲಾಕುಮಾರಿಯೆಂಬ ಒಬ್ಬಳೇ ಒಬ್ಬ ಮಗಳು. ಇವಳಿಗೆ ವಿದ್ಯಾಭ್ಯಾಸ ಹೇಳಿಕೊಡುವ ಕೆಲಸವನ್ನು ವಿಶ್ವನಾಥ ಮಂತ್ರಿಗೆ ಒಪ್ಪಿಸಿದ್ದರು. ಶಂಕರರಾಯನಿಗೆ ವಿಶ್ವನಾಥ ಮಂತ್ರಿಯಲ್ಲದೆ ಇನ್ನಿಬ್ಬರು ಬೇರೆ ಮಂತ್ರಿಗಳೂ ಇದ್ದರು. ಶಂಕರರಾಯನು ಮೊದಮೊದಲು ನಾಲ್ಕಾರು ವರುಷ ಚೆನ್ನಾಗಿ ರಾಜ್ಯವನ್ನಾಳಿದನು. ಯಾರಾದರೂ ಮೋಸಗೊಳಿಸಿದರೆ ಸಾಕು ಒಮ್ಮೆಲೆ ಮೋಸ ಹೋಗುವ ಸ್ವಭಾವವು ಇವನಲ್ಲಿತ್ತು. ಈ ಕೆಟ್ಟ ಗುಣವೊಂದರಿಂದಲೇ ಇವನ ರಾಜ್ಯವು ಅವನತಿಗೆ ಬಂದಿತು ವಿಲಾಸಕುಮಾರನ ಕಪಟತಂತ್ರಕ್ಕೆ ಶಂಕರರಾಯನು ಒಮ್ಮೆಲೆ ತುತ್ತಾಗಿ ಬಿಟ್ಟನು.

ವಿಲಾಸ ಕುಮಾರನು ವಿಶಾಖಾಪಟ್ಟಣದ ದೊಡ್ಡ ವರ್ತಕನ ಮಗನು. ಇವನ ವ್ಯವಹಾರವು ಮಹೀಪಟ್ಟಣದಲ್ಲಿಯೂ ವಿಶಾಖಾ ಪಟ್ಟಣದಲ್ಲಿಯೂ ಕೂಡಿಯೇ ನಡೆದಿತ್ತು. ತನ್ನ ವ್ಯಾಪಾರೋದ್ಯೋಗದ ಮೇಲ್ವಿಚಾರಣೆಗಾಗಿ ಮೇಲಿಂದ ಮೇಲೆ ವಿಲಾಸಕುಮಾರನು ಮಹೀಪಟ್ಟಣಕ್ಕೆ ಹೋಗಿ ಬರುತ್ತಲಿದ್ದ. ಇವನು ಶಂಕರರಾಯರ ಮಗಳಾದ ಕಮಲಾದೇವಿಯ ರೂಪಲಾವಣ್ಯಗಳಿಗೆ ಮೆಚ್ಚಿ ಅವಳನ್ನು ಅಪಹರಿಸಬೇಕೆಂದು ಬಗೆದನು. ಇವನು ಬಲು ಮೋಸಗಾರ. ಹೆಸರಿಗನುಗುಣವಾಗಿ ವಿಲಾಸಗಳಿಗೆ ತುಂಬಾ ಮೆಚ್ಚಿದನು. ಮದ್ಯಪಾನ ಮಾಡುವದರಲ್ಲಿ ಇವನಿಗೆ ಸರಿಗಟ್ಟುವವರೇ ಇರಲಿಲ್ಲ. ಸರದಾರರಂತೆ ವೇಷಧಾರಣ ಮಾಡುವದೊಂದೇ ಗೊತ್ತು ಹೊರ್ತು, ಶೂರತನವು ರವಷ್ಟಾದರೂ ಇರಲಿಲ್ಲ. ಬರುವಾಗ್ಗೆ ಸುಮಾರು ಇಪ್ಪತ್ತೈದು ಲಕ್ಷ ರೂಪಾಯಿಗಳು ಇವನಲ್ಲಿದ್ದವು. ದಿನವೊಂದಕ್ಕೆ ಬೇರೆ ಬೇರೆ ವಸ್ತ್ರಾಲಂಕಾರಗಳನ್ನು ಮಾಡಿಕೊಂಡು ಅರಮನೆಯಲ್ಲಿ ನುಸುಳಿ ಶಂಕರರಾ

ಯನ ಪರಿಚಯವನ್ನು ಮಾಡಿಕೊಂಡನು. ಶಂಕರರಾಯನಿಗೆ ತಾನೊ
ಬ್ಬ ಶೂರ ಸರದಾರನೆಂದೂ, ತನ್ನಲ್ಲಿ ಬೇಕಾದಷ್ಟು ಹಣವಿದೆಯೆಂದೂ
ತನಗೆ ಸಂಬಳಗಿಂಬಳ ಏನೂ ಬೇಕಿಲ್ಲೆಂದೂ, ತಾನು ಪುಕ್ಕಟೆಯಾಗಿ
ಸೇನಾಪತಿಯ ಕೆಲಸ ಮಾಡುವನೆಂದೂ ಬಡಿವಾರದ ಮಾತು ಹೇಳಿ
ದನು. ಕೂಡಲೆ ಶಂಕರರಾಯನು ಮೋಸ ಹೋಗಿ ಒಪ್ಪಿಕೊಂಡನು
ವಿಶ್ವನಾಥ ಮಂತ್ರಿಯು ಹೀಗೆ ಮಾಡುವದು ಒಳಿತಾಗಲಿಕ್ಕಿಲ್ಲವೆಂದ
ಪರಿಪರಿಯಾಗಿ ಹೇಳಿಕೊಂಡರೂ ಶಂಕರರಾಯನು ಒಪ್ಪಲಿಲ್ಲ. ವಿಲಾಸ
ಕುಮಾರನ ಹಾರಾಟಕ್ಕೆ ಎಣೆಯೇ ಇಲ್ಲದಂತಾಯಿತು. ಇವನು
ತನಗಿದ್ದ ಮದ್ಯಪಾನದ ಚಟವನ್ನು ಶಂಕರರಾಯನಿಗೂ ಹಚ್ಚಿದ್ದಲ್ಲದ
ಆವನ ಸೈನಿಕರಲ್ಲಿ ಎಷ್ಟೋ ಜನರಿಗೂ ಹಚ್ಚಿದನು ಎಲ್ಲರೂ ಈ ವ್ಯಸ
ನಕ್ಕೀಡಾದುದರಿಂದ ಆ ಪಟ್ಟಣದಲ್ಲಿ ಒಂದು ಮದ್ಯದಂಗಡಿಯನ್ನೇ
ಇಡಬೇಕಾಯಿತು. ವಿಲಾಸಕುಮಾರನು ಸ್ವಂತ ವೆಚ್ಚದಿಂದ ಒಂದು
ಅಂಗಡಿಯನ್ನು ತೆಗೆಸಿದನು. ಈ ವ್ಯಸನದಿಂದ ನಾಲ್ಕೈದು ವರುಷ
ಗಳಲ್ಲಿಯೇ ಶಂಕರರಾಯನ ಬೊಕ್ಕಸವು ಬರಿದಾಗುತ್ತ ಬಂದಿತು
ಇದರಿಂದ ಶಂಕರರಾಯನು ಜನರ ಮೇಲೆ ಹೆಚ್ಚಿನ ಕರವನ್ನು ಕೂಡ್ರಿಸ
ಹತ್ತಿದನು ವಿಲಾಸಕುಮಾರನು ಮದ್ಯದಂಗಡಿಯಿಂದ ಬಂದ ಹಣ
ವನ್ನೆಲ್ಲ ವಿಶಾಖಾಪಟ್ಟಣಕ್ಕೆ ತನ್ನ ತಂದೆಗೆ ಕಳಿಸುತ್ತಿದ್ದನು. ವಿಲಾ
ಸಕುಮಾರನಿಗೆ ಹೇಗಾದರೂ ಮಾಡಿ ಕಮಲಾದೇವಿಯನ್ನು ಲಗ್ನವಾ
ಗಬೇಕೆಂದಿದ್ದಿತು. ಅವನು ಸುರಲೋಕ ಸುಂದರಿಯ ಪ್ರಾಪ್ತಿಯ
ಹಂಬಲಕ್ಕಾಗಿ ತನ್ನ ಯೋಗ್ಯತೆಯನ್ನು ಮೀರಿ ಅರಸನ ವೈಭವದಿಂದ
ಅವಳ ಮಂದಿರದ ಮುಂದೆ ಎಷ್ಟೋ ಸಾರೆ ಸುಳಿದಾಡಿದನು 'ಸಮಾ
ನಶೀಲಾ ವ್ಯಸನೇಷು ಸಖ್ಯಂ' ಎಂಬ ಶ್ಲೋಕಕ್ಕನುಸರಿಸಿ ಶಂಕರರಾ
ಯನು ವಿಲಾಸನನ್ನು ಬಲು ಪ್ರೀತಿಸುತ್ತಿದ್ದನು. ಕಮಲಾದೇವಿಯನ್ನು
ತನಗೆ ಕೊಡುವ ಬಗ್ಗೆ ವಿಲಾಸಕುಮಾರನು ಶಂಕರರಾಯನಿಂದ ವಚ
ನವನ್ನಾದರೂ ತೆಗೆದುಕೊಂಡಿದ್ದನು.

ವಿಲಾಸಕುಮಾರನು ವಿಶ್ವನಾಥ ಮಂತ್ರಿಯು ತನ್ನ ಕಪಟ
ತಂತ್ರಕ್ಕೆ ಬಲಿ ಬೀಳದ್ದರಿಂದ ಅವರನ್ನು ದ್ವೇಷಿಸುತ್ತಿದ್ದನು. ಅವರ

ವಿಷಯವಾಗಿ ದಿನಾಲು ರಾಜನಲ್ಲಿ ತಾತ್ಸಾರ ಹುಟ್ಟಿಸಹತ್ತಿದನು. ಆದುದರಿಂದ ವಿಶ್ವನಾಥ ಮಂತ್ರಿಯವರ ಯಾವ ಮಾತುಗಳೂ ನಡೆಯು ದಂತಾವು. ಅವರು ಬಹಳ ಚಿಂತಾಕ್ರಾಂತರಾದರು. ಅವರೊಡನೆ ಯಾವ ಅಧಿಕಾರಿಗಳೂ ಮಾತನಾಡದಾದರು " ಯಥಾರಾಜಾ ತಥಾ ಪ್ರಜಾ " ಎಂಬಂತೆ ಎಲ್ಲ ಅಧಿಕಾರಿಗಳೂ ಶಂಕರರಾಯ, ವಿಲಾಸ ಕುಮಾರನಂತೆಯೇ ಅಧಿಕಾರಮದದಿಂದ ಉರಿದಾಡಹತ್ತಿದರು ವಿಶ್ವ ನಾಥ ಮಂತ್ರಿಗಳೊಬ್ಬರೇ ಏನು ಮಾಡಬೇಕ.? ಪಾಪ! ಆದರೂ ಅವರು ಧೈರ್ಯ ಬಿಡದೆ ತಮ್ಮ ಕೈಲಾದ ಮಟ್ಟಿಗೆ ಅವರನ್ನು ಚಟ ದಿಂದ ಬಿಡುಗಡೆ ಮಾಡುವದಕ್ಕೆ ಪ್ರಯತ್ನ ಮಾಡಿದರು. ಬಡಬಗ್ಗರ ಮನೆಗೆ ಹೋಗಿ ಸೆರೆ-ಸಿಂದಿಗಳ ಚಟದಿಂದಾಗುವ ದುಷ್ಪರಿಣಾಮವನ್ನು ತಿಳಿಸಿ ಹೇಳಹತ್ತಿದರು. ಇದನ್ನು ಸಹಿಸಲಾರದೆ ವಿಲಾಸಕುಮಾರನು ಶಂಕರರಾಯನ ತಲೆಯಲ್ಲಿ ಏನೇನೋ ತುಂಬಿ ಮಂತ್ರಿಯನ್ನು ಹೊರಗೆ ಹಾಕಿಸುವ ವಚನವನ್ನು ತೆಗೆದುಕೊಂಡನು. ಈ ಸುದ್ದಿಯನ್ನರಿತರೂ ಎದೆಗೆಡದೆ ಮಂತ್ರಿಯು ತನ್ನ ಸತ್ಕಾರ್ಯವನ್ನು ಮತ್ತಷ್ಟು ಜೋರಿ ನಿಂದ ನಡೆಯಿಸಿದನು.

೨

ಕಮಲಾದೇವಿಯು ಪ್ರಾಯಕ್ಕೆ ಬಂದಿದ್ದಳು. ಇದೀಗ ಅವಳಿಗೆ ಹದಿನೈದು ವರುಷ. ವೀರ ಮಹಿಳೆಯರಲ್ಲಿರಬೇಕಾದ ಎಲ್ಲ ಗುಣ ಗಳೂ ಅವಳಲ್ಲಿದ್ದವು. ಸೌಂದರ್ಯದಲ್ಲಿ ಅವಳಿಗೆ ಸಮಾನರಿರಲಿಲ್ಲ. ಅವಳಿಗೆ ಎಲ್ಲರೂ ರಾಜಸ್ಥಾನದ ಕುಸುಮವೆಂದು ಕರೆಯುತ್ತಿದ್ದರು ಅವಳು ಈಗಿನ ಕಾಲದ ಕೆಲವು ಸ್ತ್ರೀಯರಂತೆ ತಾವು ಚೆಲುವೆಯರೆಂದೆ ನಿಸಿಕೊಳ್ಳಬೇಕೆಂದು ಅಡ್ಡ ಬೈತಲು ತೆಗೆದುಕೊಂಡು ನಾಟಕದೊಳಗಿನ ನಟಿಯರಂತೆ ಮೋರೆಗೆ ಬಣ್ಣ ಬಳಿದುಕೊಂಡು ಬಡಿವಾರ ಮಾಡುತ್ತ ಮೆರೆದಾಡಿ ಚೆಲುವೆಯೆಂದೆನಿಸಿಕೊಳ್ಳುವಳಲ್ಲ. ನಿಜವಾದ ಸೌಂದರ್ಯ ವುಳ್ಳವಳು. ಅವಳ ರೂಪಲಾವಣ್ಯವು ಹೇಗೆ ಅಸಮಾನವಾದುದೋ ಹಾಗೆಯೇ ಅವಳ ದೇಶಾಭಿಮಾನವೂ ಸ್ವಾತಂತ್ರ್ಯಾಭಿಮಾನವೂ ಅಸ ದೃಶವಾದವು. ಅವಳೂ ವಿಶ್ವನಾಥ ಮಂತ್ರಿಯ ಮಗನಾದ ಮುಕುಂ

ದನೂ ಚಿಕ್ಕಂದಿನಿಂದಲೂ ಕೂಡಿ ಆಡಿದವರು. ವಿಶ್ವನಾಥ ಮಂತ್ರಿಗಳ ಕೈಯಲ್ಲಿಯೇ ವಿದ್ಯಾಭ್ಯಾಸ ಮಾಡಿದವರು. ಅವಳು ಮುಕುಂದನನ್ನಗಲಿ ಒಂದರಕ್ಷಣವೂ ಇರುತ್ತಿರಲಿಲ್ಲ. ಅವಳ ಮನದಲ್ಲಿ ಮುಕುಂದನನ್ನೇ ಲಗ್ನವಾಗಬೇಕೆಂದು ಅಪೇಕ್ಷೆ. ಮೊದಮೊದಲು ಶಂಕರರಾಯನಾದರೂ ಮುಕುಂದನಿಗೇ ಅವಳನ್ನು ಕೊಡತಕ್ಕದ್ದೆಂದು ನಿಶ್ಚಯಿಸಿದನು. ಆಧರೆ ನಮ್ಮ ಕಮಲಾದೇವಿಯ ದುರ್ದೈವದಿಂದ ಎಲ್ಲವೂ ವಿಪರೀತವಾಯಿತು. ವಿಲಾಸಕುಮಾರನ ಕಪಟತಂತ್ರದಿಂದ ಶಂಕರರಾಯನ ವಿಚಾರದಲ್ಲಿ ಮಾರ್ಪಾಟಾಗಿ ಶಂಕರರಾಯನು ಕಮಲೆಗೆ ವಿಲಾಸಕುಮಾರನೊಡನೆ ಮದುವೆಯಾಗಬೇಕೆಂದು ಬಲುಮೆ ಮಾಡಹತ್ತಿದನು. ಅಂದಿನಿಂದ ಕಮಲೆಯ ಹೃದಯಕ್ಕೆ ಚೇಳು ಕುಟುಕಿದಂತಾಯಿತು ದುಃಖಾಗ್ನಿಯಲ್ಲಿ ಸಿಲುಕಿ ತಳಮಳಗೊಳ್ಳಹತ್ತಿದಳು. ಅವಳಿಗೆ ಆ ದುರ್ಮುಖನಾದ ವಿಲಾಸಕುಮಾರನ ಕಪಟತಂತ್ರಗಳೆಲ್ಲವೂ ತಿಳಿದಿದ್ದವು. ಎಷ್ಟೋ ಸಲ ತನ್ನ ತಂದೆಗೆ "ಅಪ್ಪಾ! ಆ ವಿಲಾಸನ ಕಪಟ ತಂತ್ರಕ್ಕೆ ಬಲಿ ಬೀಳಬೇಡಿರಿ! ಇಂದು ಆವನು ಪುಕ್ಕಟೆ ಕೆಲಸ ಮಾಡುವವನಂತೆ ಕಣ್ಣಿಗೆ ಕಂಡರೂ, ಹಿತೈಷಿಯಂತೆ ನಿಮಗೆ ತೋರಿದರೂ ನಾಳೆ ಅವನು ನಮ್ಮ ರಾಜ್ಯವನ್ನೆಲ್ಲ ನುಂಗಿ ನೀರು ಕುಡಿಯತಕ್ಕ ನೀಚನಿರುವನೆಂಬುದನ್ನು ಮರೆಯಬೇಡಿರಿ! ಅವನು ನಮ್ಮ ಪಟ್ಟಣಕ್ಕೆ ಬಂದಂದಿನಿಂದ ಜನರು ಎಷ್ಟು ಬಡವರಾಗಿದ್ದಾರೆ? ವಿಚಾರ ಮಾಡಿರಿ! ಮದ್ಯಪಾನವೆಂಬ ಘನಘೋರವಾದ ದುಶ್ಚಟವನ್ನು ಜನರಿಗೆ ಹಚ್ಚಿ ಅವರಿಂದ ಮಿತಿಮೀರಿ ಹಣ ಸೂರೆ ಮಾಡಿಕೊಂಡು ತಮ್ಮ ತಂದೆಗೆ ಕಳಿಸುತ್ತಿರುವದು ಕಾಣಲೊಲ್ಲದೇ?" ಎಂದು ಪರಿಪರಿಯಾಗಿ ಹೇಳಿಕೊಳ್ಳುತ್ತಿದ್ದಳು ಆದರೆ ತಂದೆಯು "ಅಧಿಕಪ್ರಸಂಗೀ ನಿನಗೇಕೆ ಕಾರಭಾರ?" ಎಂದು ಮೊದಲಾಗಿ ಬೈಯುತ್ತಿದ್ದುದರಿಂದ ತನ್ನ ತಂದೆಯ ವಿರುದ್ಧ ವರ್ತಿಸಬಾರದೆಂದು ಸುಮ್ಮನಿರುತ್ತಿದ್ದಳು ಆದರೆ ಕಮಲಾದೇವಿಯು ವಿಲಾಸಕುಮಾರನೊಡನೆ ಲಗ್ನವಾಗಬೇಕೆಂದು ಶಂಕರರಾಯನು ಹೇಳಿದೊಡನೆ "ನಾನೆಂದಿಗೂ ಆ ಮದಾಂಧನನ್ನು ಮದುವೆಯಾಗಲಿಕ್ಕಿಲ್ಲ! ಅಪ್ಪಾ ಮುಕುಂದನೊಡನೆ ಲಗ್ನ ಮಾಡು

ತ್ತೇವೆಂದು ನೀವೇ ವಚನವನ್ನಿತ್ತಿಲ್ಲವೇ ?" ಎಂದು ವಿನಯದಿಂದ ಕೇಳಿದಳು. ಆದರೆ ನೆರೆಬಡಕರಿಗೆಲ್ಲಿಯ ವಚನ? ವಚನವಂತೆ ವಚನ ! ವಿಲಾಸಕುಮಾರನನ್ನೇ ಮದಿವೆಯಾಗಬೇಕು.'' ಎಂದು ಹೇಳಿದನು. ಅಂದಿನಿಂದ ಕಮಲಾದೇವಿಯು ಬಹಳೇ ಚಿಂತಾಕ್ರಾಂತಳಾದಳು

ಸಂಜೆಯ ಆರು ಗಂಟೆಯ ಸಮಯ ; ಕಮಲಾದೇವಿಯು ಇದೇ ವಿಚಾರದಲ್ಲಿ ಮಗ್ನಳಾಗಿ ತನ್ನ ಮಂದಿರದ ಮುಂಬಾಗಿಲಲ್ಲಿ ಮಂಚದ ಮೇಲೆ ಕುಳಿತುಕೊಂಡಿದ್ದಳು. ದೀರ್ಘ ವಿಚಾರ ಮಾಡುತ್ತಿದ್ದಂತೆ ಅವಳ ಮೊಗವೇ ಹೇಳುತ್ತಿದ್ದಿತು. ಸಮುದ್ರದ ಅಲೆಗಳ ಮಧ್ಯದಲ್ಲಿ ಸಿಲುಕಿ ಸಿರಿಗುರಿಗಳನ್ನು ಕಾಣದ ನೌಕೆಯಂತೆ ಅವಳ ದೀರ್ಘ ವಿಚಾರವು ಮಹತ್ತರವಾದ ದುಃಖದ ಆಲೆಗಳ ಮಧ್ಯದಲ್ಲಿ ಸಿಲುಕಿತ್ತು. ಅವಳಿಗೆ ಹೊರಗಣ ಅರಿವೇ ಇರಲಿಲ್ಲ. ಹಠಾತ್ತಾಗಿ ಮುಕುಂದನು ಅಲ್ಲಿಗೆ ಬಂದನು. ಅದಾವುದೋ ಗಹನವಾದ ಯೋಚನೆಯಲ್ಲಿ ಕಮಲೆಯು ಕುಳಿತದ್ದನ್ನು ಕಂಡನು. ಕಣ್ಣಲುಗಿಸದೆ ಹೊರಗೆ ನಿಂತು ನೋಡಿಯೇ ನೋಡಿದನು. ನೋಡುವದಾದರೂ ಆದಷ್ಟು ವೇಳೆ? ಕಮಲೆಯು ಸ್ವಾಭಾವಿಕವಾಗಿಯೇ ಸೌಂದರ್ಯವತಿ. ಆದರಲ್ಲಿಯೂ ಅವಳ ಅಂಗಾಂಗಗಳು ಇದೀಗ ಎಳೆಯತನದ ಮೇರೆಯನ್ನು ಮೀರುತ್ತ ನಡೆದಿದ್ದವು. ತಂಗಾಳಿಯಿಂದ ಮೆಲ್ಲಗೆ ಅಗಳಾಡುತ್ತಿರುವ ಮುಂಗುರುಳುಗಳೂ ಯೋಚನೆಯಿಂದ ಸ್ಥಿರದೃಷ್ಟಿಯನ್ನು ತಳೆದ ಕಳೆಯುಳ್ಳ ಕಣ್ಣುಗಳೂ ಚೆಲುವಿನ ನೆಲೆಯಾದ ಕೆನ್ನೆಗಳೂ, ಮುದ್ದು ಮುದ್ದಾದ ಬಣ್ಣದುಟಿಗಳೂ, ಹರವಾದ ಹಣೆಯೂ, ಹಣ್ಣು ಸಿಂಬೆಯಂತಹ ಮೈ ಬಣ್ಣವೂ ಮುಕುಂದನ ಕಣ್ಮನಗಳನ್ನು ಸೆಳೆದು ಬಿಟ್ಟವು. ಅಂದಿನ ಕಮಲಾಕುಮಾರಿಯನ್ನು ಕಂಡು ಮುಕುಂದನು ಮನದಲ್ಲೆಷ್ಟೆಷ್ಟೋ ಬಗೆಯ ರೂಪಕಗಳನ್ನೂ ಉತ್ಪ್ರೇಕ್ಷೆಗಳನ್ನೂ ಮಾಡಿದನು "ವೇದಮಾತೃವಾದ ಗಾಯತ್ರೀಮಂತ್ರವನ್ನು ಕಂಡು ಹಿಡಿಯುವ ಸಾಧನೆಯಾವುದೆಂಬುದನ್ನು ಯೋಚಿಸುತ್ತ ಕುಳಿತ ಶಾರದೆಯೋ ಇವಳು ?'' ಎಂದನು. ಎಷ್ಟು ನೋಡಿದರೂ ಕಣ್ಣಿಗೆ ತಣಿವು ಇಲ್ಲ. ಮನಸ್ಸಿಗೆ ತೃಪ್ತಿಯಿಲ್ಲ. ಕಮಲಾಕುಮಾರಿಗೆ ಮುಕುಂದನು ಬಂದು ನಿಂತು ತನ್ನನ್ನು ನೋಡು

ತ್ತಿರುವದರ ಪರಿವೆಯೇ ಇಲ್ಲ. ಅವಳು ತನ್ನ ಯೋಚನೆಯಲ್ಲಿ ಲೀನೆ ಯಾಗಿ ಹೋಗಿದ್ದಳು. ಒಮ್ಮಿಂದೊಮ್ಮೆ ನಿಟ್ಟುಸಿರುಬಿಟ್ಟು ಮೇಲು ದನಿಯಲ್ಲಿ ರೇಗುಪ್ತಿ ರಾಗದಲ್ಲಿ ಹಾಡತೊಡಗಿದಳು.

" ನಾ ಮಾಡಿದ ಕರ್ಮ ಬಲವಂತವಾದರೆ
ನೀ ಮಾಡುವದೇನೋ ಹರಿಯೇ,

ಮಂಜುಳ ಕಂಠದಿಂದ ಹಾಡುತ್ತಿರುವ ಅವಳ ಹಾಡನ್ನು ಕೇಳಿ ಮುಕುಂದನು ಇನ್ನಿಷ್ಟು ಹುಚ್ಚನಂತಾದನು. ಅವನಿಗೀಗ ತಡೆಯು ವದಾಗಲಿಲ್ಲ ಹಿಂದಿನಿಂದ ಹೋಗಿ ಅವಳ ಕಣ್ಣು ಮುಚ್ಚಿದನು. ಕಮಲಾಕುಮಾರಿಯು ಬೆಚ್ಚಿಬಿದ್ದಳು ಕೂಡಲೆ ಅವನು ಕೈ ತೆಗೆದನು ಹಿಂದಿರುಗಿ ನೋಡಿದಳು ಮುಗುಳು ನಗೆ ನಗುತ್ತ ನಿಂತ ಮುಕುಂ ದನನ್ನು ಕಂಡಳು. ಮುಳ್ಳಿನ ತುಂಬನ್ನು ಹಿಂಪಕ್ಕೊತ್ತಿ ಪ್ರಫುಲ್ಲಿತ ವಾಗಿ ತೋರುವ ಗುಲಾಬದಂತೆ ಕುಮಲಾಕುಮಾರಿಯು [ ತನ್ನ ಚಿಂತೆ ಯನ್ನು ಮರೆಮಾಡಿ]

" ಯಾವಾಗ ಬಂದೆ? ಮುಕುಂದ! ನಿನ್ನ ದಾರಿಯನ್ನೇ ಕಾಯು ತ್ತಲಿದ್ದೆನು " ಎಂದು ನುಡಿದಳು. ಆದರದಿಂದ ಅವನನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡಳು.

' ಕಮಲೆ! ನಾನು ಬಂದಾಗ ನೀನೇನೋ ಗಹನವಾದ ಯೋಚ ನೆಯಲ್ಲಿ ಮುಳುಗಿ ಹೋಗಿದ್ದೆಯಲ್ಲ? ಅದೇನು ಯೋಚನೆ? ಎಂದು ಕುತೂಹಲ ನೋಟದಿಂದ ಮುಕುಂದನು ಕೇಳಿದನು

" ಇಲ್ಲ! ನನಗೇತರ ಯೋಚನೆ? ತಲೆಶೂಲೆ ಎದ್ದಿತ್ತು. ಹಾಗೇ ಕುಳಿತಿದ್ದೆ. ಇಷ್ಟೇ ಹೊರತು ಮತ್ತೇನಿಲ್ಲ ಕಮಲೆಯು ಚಿಂತೆ ಯನ್ನು ಮರೆಮಾಡಿ ಹೇಳಿದಳು.

"ಕಮಲೇ ನಾನೇನು ಮೊಲೆಯುಣ್ಣುವ ಎಳೆಗೂಸೆಂದು ಭಾವಿ ಸಬೇಡಾ! ಅದೆಷ್ಟೋ ವೇಳೆಯು ವರೆಗೆ ನಿನ್ನನ್ನು ನೋಡುತ್ತ ನಿಂತು ಕೊಂಡಿದ್ದೆನು. ನಿನಗದರ ಅರಿವು ಕೂಡ ಇರಲಿಲ್ಲ. ಮೈಯಲುಗಿಸದೆ,

ಕಣ್ಣು ಕದಲಿಸದೆ ಶೂನ್ಯ ದೃಷ್ಟಿಯವಳಾಗಿ ಕುಳಿತಿದ್ದೆ? ಯೋಚನೆ ಏನೂ ಇಲ್ಲದಿದ್ದಲ್ಲಿ ನಡುವೇ ನಿಟ್ಟುಸಿರು ಬಿಟ್ಟು "ನಾವಾಡಿದ ಕರ್ಮ" ಎಂಬ ಪದವನ್ನೇಕೆ ಹಾಡುತ್ತಿದ್ದೆ? ಅದೇನು ನನಗೆ ಹೇಳದಂತಹ ಯೋಚನೆ ಏನು? ಮುಕುಂದನು ಕಳವಳ ದನಿಯಿಂದ ಕೇಳಿದನು.

ಕಮಲಾಕುಮಾರಿಯು ಏನೂ ಮಾತಾಡಲಿಲ್ಲ ಕುತ್ತಿಗೆಯ ನರಗಳು ಬಿಗಿದವು ನೀರು ತುಂಬಿದ ಕಣ್ಣುಗಳಿಂದ ಮುಕುಂದನ ಕಡೆಗೆ ನೋಡತೊಡಗಿದಳು.

" ಏಕೆ ಹೇಳುವಂತಿಲ್ಲವೇನು? '' ಮುಕುಂದನು ಮೆಲ್ಲಗೆ ಕೇಳಿದನು.

" ಮುಕುಂದ! ಏನು ಹೇಳಲಿ ನನ್ನ ಕಥೆ! ನನ್ನ ತಂದೆಯು ನನಗೆ ವಿಲಾಸಕುಮಾರನೊಡನೆ ಮದುವೆಯಾಗೆಂದು ಒತ್ತಾಯ ಪಡಿಸಹತ್ತಿದ್ದಾನೆ ನಮ್ಮ ಅಪ್ಪನಿಗೆ ಆ ಮಾಟಗಾರನಾದ, ಪರಕೀಯನಾದ, ಮೋಸಗಾರನಾದ, ಆ ವಿಲಾಸಕುಮಾರನು ಹಿತೈಷಿಯಾಗಿ ಕಾಣಹತ್ತಿದ್ದಾನೆ. ನೋಡಿದೆಯಾ? ಅವನು ಬಂದು ನಾಲ್ಕಾರು ವರ್ಷಗಳಾಗಿಲ್ಲ; ಎಷ್ಟು ಗರ್ವಿಷ್ಠನಾಗಿದ್ದಾನೆ! ಪಟ್ಟಣದ ಮೇಲೆ ಅವನ ಅಧಿಕಾರವು ಕೂಡ ಇಲ್ಲ. ಅವನ ಪಟ್ಟಣವಲ್ಲ! ಏನಿಲ್ಲ! ಅಧಿಕಾರ ಮದದಿಂದ ಎಷ್ಟು ಉರಿಯಹತ್ತಿದ್ದಾನೆ ಅವನ ಕಾಲ್ಗುಣವೆಂತಹದೊ? ಜನರೆಲ್ಲ ಹೀನದೀನ ಸ್ಥಿತಿಗೆ ಬಂದಿದ್ದಾರೆ. ಸೆರೆ ಸಿಂದಿಯ ಸೋಂಕು ಕೂಡ ಬಡಿಯದ ನಮ್ಮ ಪಟ್ಟಣದಲ್ಲಿ ಆ ಮಹಾರಾಯನು ಈ ಹೇಸಿಚಟವನ್ನು ಬಿತ್ತಿ ಬಿಟ್ಟಿದ್ದಾನೆ. ಈ ಮಹಾರಾಯನು ಯಾವ ಮುಹೂರ್ತದಲ್ಲಿ ಬಂದನೋ? ಬೀದಿಯ ಮಾರಿಯನ್ನು ಕೂಗಿ ಕರೆದಂತಾಗಿದೆ. ಮುಕುಂದ! ಏನು ಮಾಡಲಿ? ನಾನಂತೂ ಆ ಪಾತಕಿಯ ಮೋರೆಯನ್ನು ಸಹ ನೋಡತಕ್ಕವಳಲ್ಲ" ಎಂದು ನಿಶ್ಚಯಪೂರ್ವಕವಾದ ವಾಣಿಯಿಂದ ನುಡಿದಳು.

" ಸುಂದರೀ! ನಿನ್ನ ಅಭಿಪ್ರಾಯವಾದರೂ ಏನಿರುವದು? ನಿನ್ನ ಆರಾಧ್ಯದೇವತೆಯಾದ ವರರತ್ನನಾರು? " ಮುಕುಂದ ಅರಿಯದವರಂತೆ ಕೇಳಿದ.

"ಮುಕುಂದ! ನನ್ನ ಪರೀಕ್ಷೆಯನ್ನು ಮಾಡಬೇಕೆನ್ನುವಿಯಾ? ಅಥವಾ ನನ್ನ ಬಾಯಿಯಿಂದ ನಿನ್ನ ಹೆಸರನ್ನು ಕೇಳಿ ಆನಂದದಿಂದ ನಲಿದಾಡಬೇಕೆನ್ನುವಿಯಾ? ನೀನೇ......."

ಸ್ವಲ್ಪ ತಡೆದು ಕಮಲೆಯು "ನಿನೇನು ಅರಿಯದವನೇ? ನಿನ್ನ ವಿಚಾರವೇನು ಬೇರೆ ಇರುವದೇ? ನಾನು ಬಾಯಿಯಿಂದ ಆಡಿತೋರಿಸಿದೆ ನೀನು ಹೊಟ್ಟೆಯಲ್ಲಿಟ್ಟುಕೊಂಡಿರುವಿ" ಎಂದು ಮೋರೆ ಕೆಳಗೆ ಮಾಡಿ ಕಿರುನಗೆಯಿಂದ ನುಡಿದಳು.

ಮುಕುಂದನು ನಸುನಕ್ಕು "ಅಹುದು! ನೀನೊಳ್ಳೆಯ, ಚತುರೆಯಾದ ನಿರೀಕ್ಷಕಳು" ಎಂದು ನುಡಿದ ತಾಸು ಹೊತ್ತಾದ ಬಳಿಕ ಮುಕುಂದನು ತನ್ನ ತಂದೆಯು ಬಳಿಯಲ್ಲಿ ಯಾವದೋ ಒಂದು ಕೆಲಸವಿದ್ದದರಿಂದ ಕಮಲೆಗೆ ಅರಿಕೆ ಮಾಡಿಕೊಂಡು ಹೊರಟು ಹೋದನು.

ಮುಕುಂದನು ಹೋಗಿ ನಾಲ್ಕೈದು ನಿಮಿಷಗಳಾಗಿರಲಿಲ್ಲ ಕಮಲಾದೇವಿಯನ್ನು ಹುಡುಕುತ್ತ ವಿಲಾಸಕುಮಾರನು ಅವಳಿದ್ದೆಡೆಗೆ ಬಂದನು ಧನಾಢ್ಯನಿಗಿಂತಲೂ ಧನಾಢ್ಯನ ವೇಷಧಾರಣ ಮಾಡಿಕೊಂಡಿದ್ದನು. ಅವಳ ಕಡೆಗೆ ಒಂದೇಸವನೆ ದಿಟ್ಟಿಸಿ ನೋಡಹತ್ತಿದನು. ಅವಳು ಹೀಗೆ ಕೂಡುವದು ಒಳಿತಲ್ಲವೆಂದು ತಿಳಿದು ಅಲ್ಲಿಂದ ಹೊರಟಳು, ವಿಲಾಸಕುಮಾರನು ಅವಳನ್ನು ತಡೆದು "ಎಲ್ಲಿ ಹೋಗುವಿ, ನಿಲ್ಲು! ನೀನು ನನ್ನ ಹೆಂಡತಿಯಾಗತಕ್ಕವಳಿರುವಿ! ನಿನ್ನ ಮೇಲೆ ಅಧಿಕಾರ ನಡೆಸಲಿಕ್ಕೆ ನನಗೆ ಹಕ್ಕು ಇರುವದು. ಮೇಲಾಗಿ ನಿನ್ನ ತಂದೆಯು ವಚನವನ್ನು ಕೊಟ್ಟಿದ್ದಾನೆ! ವಚನ!" ಎಂದು ಗದ್ದರಿಸಿದನು.

"ವಿಲಾಸಕುಮಾರ! ಸ್ತ್ರೀಯರೆಂದರೇನು ಕೈಯಲ್ಲಿ ಸಿಕ್ಕ ಗೊಂಬೆಯೆಂದು ತಿಳಿದಿರುವೆಯೇನು? ಲಗ್ನವಾಗುವದು ಬಿಡುವದು ನನ್ನ ಇಚ್ಛೆಯ ಮೇಲೆ ಅವಲಂಬಿಸಿರುತ್ತದೆ. ಮನಸ್ಸಿನಿಂದ ಒಮ್ಮೆ ನನ್ನ ಪ್ರೇಮವನ್ನು ಮುಕುಂದನಿಗೆ ದಾನ ಮಾಡಿಬಿಟ್ಟಿದ್ದೇನೆ. ಅದರ ವಿರುದ್ಧವಾಗಿ ನಾನು ನಡೆದರೆ ದೇವರ ನ್ಯಾಯಸ್ಥಾನದಲ್ಲಿ ವ್ಯಭಿಚಾರ ಮಾಡಿದಂತಾಗುತ್ತದೆ! ವಿಲಾಸಕುಮಾರ! ಇಲ್ಲದ ಹವ್ಯಾ

ಸಕ್ಕೆ ಬೀಳಬೇಡ! ಪರಸ್ತ್ರೀಯರ ಮೇಲೆ ಈ ರೀತಿಯಾಗಿ ಬಲಾತ್ಕಾರ ಮಾಡುವದು ಉಚಿತವಲ್ಲ. ಇಂಥ ಪಾಪದ ಕೆಲಸಕ್ಕೆ ಕೈ ಹಾಕಬೇಡ! ಎಂದು ವಿನಯದಿಂದ ಕಮಲಾಕುಮಾರಿಯು ನುಡಿದಳು.

ವಿಲಾಸನಿಗೆ ರೇಗಿತು. "ಚಾಂಡಾಲೀ! ನನಗೆ ಬುದ್ಧಿಗಲಿಸಲು ನೀನೆಷ್ಟರವಳು? ಮುಕುಂದನಂತೆ ಮುಕುಂದ! ಆ ಮುಕುಂದನ ದರುಶನವು ಕೂಡ ನಿನಗಾಗದಂತೆ ವ್ಯವಸ್ಥೆ ಮಾಡಿದ್ದೇನೆ ಕಂಡೆಯಾ ಈ ಸರದಾರನ ಸಾಹಸವನ್ನು? ಇದೇ ಈಗ ಆ ಮುದುಕ ವಿಶ್ವನಾಥ ಮಂತ್ರಿಯೊಬ್ಬನು ಉಪದೇಶ ಮಾಡಲಿಕ್ಕೆ ಬಂದು ರಾಜಧಾನಿಯಿಂದ ದಬ್ಬಿಸಿಕೊಂಡು ಹೊರಗೆ ಹೋದದ್ದು ಒಳಿತಾಯಿತು. ಇಲ್ಲದಿದ್ದರೆ ಹೀಗೆಯೇ ಮುಕುಂದ! ಮುಕುಂದ ಎಂದು ಅವನ ಬೆನ್ನು ಹತ್ತಿ ತಿರುಗಾಡುತ್ತಿದ್ದೆ! ಇನ್ನೆಲ್ಲಿ ಹೋಗುತ್ತೀ ನೋಡೋಣ?" ಎಂದು ಬಡಬಡನೆ ಆವೇಶದಿಂದ ನುಡಿದನು.

ಕಮಲಾದೇವಿಗೆ ಈ ದುರ್ವಾಕ್ಯಗಳಿಂದ ಸಂತಾಪವಾಯಿತು ಸಂತಾಪದ ಭರದಲ್ಲಿ "ನರಾಧಮಾ! ನನ್ನ ಗುರುವರ್ಯರಾದ ವಿಶ್ವನಾಥ ಮಂತ್ರಿಗಳನ್ನು ಹೊರಗೆ ಹಾಕಿದೆಯಾ? ಪಿಶಾಚಿ! ಅವರಂಥ ಸತ್ವಶಾಲಿಗಳನ್ನೂ ಪರಾಕ್ರಮಶಾಲಿಗಳನ್ನೂ ಹೊರಗೆ ಹಾಕಿಸಿದ ನಿನಗೆ ನರಕವಾಸವು ತಪ್ಪಲಾರದು! ಎಚ್ಚರಿಕೆ! ವಿಶ್ವನಾಥ ಮಂತ್ರಿಗಳನ್ನೂ ಮುಕುಂದನನ್ನೂ ಹೊರಗೆ ಹಾಕುವದನ್ನು ಬಿಟ್ಟು ಹದ್ದುಪಾರು ಮಾಡಿದರೂ ಕೂಡ ಅವರ ಮತ್ತು ನನ್ನ ಮನೋದ್ವೈವತಗಳು ಎಂದಿಗೂ ಅಗಲಿ ಇರಲಾರವು! ಹೇಡಿ ನೀನು ಯಾವ ಘೋರಕೃತ್ಯಗಳನ್ನು ಮಾಡಿದರೂ ನಾನು ನಿನ್ನ ಕೈ ಹಿಡಿಯತಕ್ಕವಳಲ್ಲ!" ಎಂದು ನುಡಿದಳು.

"ಏನು ಕೈಯನ್ನು ಹಿಡಿಯತಕ್ಕವಳಲ್ಲವೇ? ನಿನ್ನನ್ನು ಬಲಾತ್ಕಾರದಿಂದ ವಶಮಾಡಿಕೊಳ್ಳುವದು ನನ್ನ ಕೈಯಲ್ಲಿಲ್ಲವೆಂದು ತಿಳಿದೆ ಏನು?" ಎಂದು ಅವಳ ಕೈ ಹಿಡಿದು ಜಗ್ಗಿದ.

ಕಮಲೆಯು ತನ್ನ ಕೈಯನ್ನು ಬಿಡಿಸಿಕೊಂಡು "ಅಧಮ! ಸರಿ ಹಿಂದಕ್ಕೆ, ಪಾಪಿ! ಬಲಾತ್ಕಾರ ಮಾಡುವದು ಸುಲಭವೆಂದಿಯಾ?

ನಿನ್ನಲ್ಲಿ ಪೌರುಷವಿದ್ದರೆ ಬಲಾತ್ಕಾರ ಮಾಡು ನೋಡಿದೆಯಾ, ಇದೇನೆಂಬುದನ್ನು (ಖಡ್ಗ ತೋರಿಸುವಳು) ನನ್ನನ್ನು ಲಗ್ನವಾಗಬೇಕೆನ್ನುವಿಯಲ್ಲವೇ? ಇಗೋ ಈ ಖಡ್ಗ ದೇವತೆಯು ನಿನ್ನ ಕೊರಳಿಗೆ ತೆಕ್ಕೆ ಬೀಳಬೇಕೆನ್ನುವಳು. ಜೋಕೆ!'' ಎಂದಳು.

ವಿಲಾಸಕುಮಾರನೇನೋ ಕೋಪಿಸಿಕೊಂಡಿದ್ದನು- ಅವನು ತನ್ನ ಶೌರ್ಯದಲ್ಲಿ ಅಷ್ಟು ನಂಬಿಗೆಯುಳ್ಳವನಾಗಿರಲಿಲ್ಲ. ಅದಕ್ಕೂ ಹೆಚ್ಚು ನಂಬಿಗೆ ಅವನಿಗೆ ತನ್ನ ದರ್ಪದಲ್ಲಿಯೇ ಇದ್ದಿತು. ಕಮಲೆಯ ಉಗ್ರರೂಪವನ್ನು ಕಂಡು ಅವನು ಹೆದರಿದನು ಕಮಲೆಯು ಸಾಮಾನ್ಯ ಸ್ತ್ರೀಯೆಂದೂ ತನ್ನ ಬೆದರಿಕೆಗೆ ಸೊಪ್ಪು ಹಾಕುವಳೆಂದೂ ಅವನಿಗನ್ನಿಸಿತ್ತು. ಆದರೆ ಇಲ್ಲಿ ಎಲ್ಲವೂ ವಿಪರೀತ. ಸಿಟ್ಟಿಗೆದ್ದು ಪ್ರಯೋಜನವಿಲ್ಲೆಂಬದನ್ನು ಕಂಡು ದೈನ್ಯಭಾವವನ್ನು ತಾಳಿದನು. "ಕಮಲೆ, ವಿಚಾರವನ್ನೆಲ್ಲಿಟ್ಟೆ, ಮುಕುಂದನಲ್ಲೇನು ಅಂತಹ ಗುಣವನ್ನು ಕಂಡಿರುವೆ! ನನಗಿರುವ ವೈಭವ ಸಂಪತ್ತುಗಳು ಅವನಿಗಿವೆಯೇ? ನನಗಿರುವ ಜನಸಹಾಯವು ಅವನಿಗಿದೆಯೇ? ನಾನು ರೂಪರಹಿತನಾಗಿದ್ದೇನೆಯೇ? ನೀನು ರತಿ, ನಾನು ಮನ್ಮಥ ಅಹಾ, ಹೊಂದಿಕೆಯೆಷ್ಟೊಂದು ಸುರಮ್ಯವಾಗುವದು ಬಲ್ಲೆಯಾ! ಮೋಹಿನಿ! ದೀನನಾಗಿ ನಿನ್ನಲ್ಲಿ ಪ್ರೇಮಯಾಚನೆ ಮಾಡುವ ಈ ಭಿಕ್ಷುಕನಿಗೆ ಪ್ರೇಮ ಭಿಕ್ಷೆಯನ್ನು ನೀಡು'' ಎನ್ನುತ್ತ ಆ ನೀಚನು ಕಮಲೆಯ ಮುಂದೆ ಮೊಣಕಾಲೂರಿ ಅವಳ ಕೈ ಹಿಡಿಯ ಹೋದನು. ಕಮಲೆಯು ಅವನನ್ನು ಝಾಡಿಸಿ ಒದ್ದು ಬಿಟ್ಟಳು. ವಿಲಾಸಕುಮಾರನಿಗೆ ಅತಿಯಾದ ಕೋಪ ಬಂದಿತು- 'ಕಮಲೆ, ಇಷ್ಟೊಂದು ಸಾಹಸಕ್ಕೆ ಉದ್ಯುಕ್ತಳಾದೆಯಾ, ನೋಡುವೆನು ನಿನ್ನನ್ನಾರು ನನ್ನ ಕೈಯೊಳಗಿಂದ ಬಿಡಿಸುವರೆಂಬದನ್ನು' ಎನ್ನುತ್ತ ಅವಳನ್ನು ಹಿಡಿಯ ಹೋದನು. ಶಂಕರರಾಯನು ಹಠಾತ್ತಾಗಿ ಅದೇ ವೇಳೆಗೆ ಅಲ್ಲಿ ಬಂದನು.

ಮತ್ತೆ ವಿಲಾಸಕುಮಾರನು "ಕಮಲೆ! ಮಾತನಾಡು! ಸಮಕ್ಷಮ ನಿನ್ನ ತಂದೆಯೇ ನಿಂತಿದ್ದಾನೆ. ಈಗಲಾದರೂ ಲಗ್ನಕ್ಕೆ ಒಪ್ಪಿಗೆ ಕೊಡು'' ಎಂದು ಹೀಯಾಳಿಸುವ ಸ್ವರದಿಂದ ಮಾತನಾಡಿದ.

"ಸಾಕ್ಷಾತ್ ಬ್ರಹ್ಮದೇವರು ಬಂದರೂ ಈ ಕೆಚ್ಚೆದೆಯ ಕುಮಾರಿಯು ತನ್ನ ನಿಶ್ಚಯವನ್ನು ಸಡಿಲುಪಡಿಸತಕ್ಕವಳಲ್ಲ! ಇದನ್ನು ಗಂಟು ಹಾಕಿಟ್ಟುಕೋ" ಎಂದು ಗಂಭೀರದಿಂದ ನುಡಿದಳು. ಶಂಕರರಾಯನಿಗೂ ಕೋಪ ಬಂದಿತು "ಏ! ಜಾರಿಣಿ! ವಿಲಾಸ ಕುಮಾರನಂಥ ಸರ್ವೋತ್ಕೃಷ್ಟ ವರನು ಎಲ್ಲಿಯಾದರೂ ಸಿಕ್ಕಬಹುದೇ? ಅವನಿಗೆ ಸಿಕ್ಕಸಿಕ್ಕ ಹಾಗೆ ಉತ್ತರವನ್ನು ಕೊಡುವಿಯಾ?" ಎಂದು ಬೆದರಿಕೆ ಹಾಕಿದನು.

ಇದರಿಂದ ಆ ಕುಮಾರಿಯು ಎದೆಗೆಡಲಿಲ್ಲ. ತಂದೆಗೆ ಹೇಳಿದಳು "ಅಪ್ಪಾ ಆ ನೀಚನು ಯಾರೂ ಇಲ್ಲದ ವೇಳೆಯನ್ನು ಸಾಧಿಸಿ ನನ್ನ ಮೇಲೆ ಬಲಾತ್ಕಾರ ಮಾಡಲಿಕ್ಕೆ ಬಂದದ್ದನ್ನು ನೀವು ಕಣ್ಣಾರೆ ಕಂಡಿರಿ ಆದಾಗ್ಯೂ ಆ ಪಾತಕಿಯನ್ನೇರಿಗಟ್ಟಿಕೊಂಡು ನನ್ನನ್ನು ದೂರುವಿರಾ? ಅಪ್ಪಾ! ನನ್ನನ್ನು ದೂರುವದನ್ನು ಬಿಟ್ಟು ಇರಿದು ಕೊಂದರೂ ಅಡ್ಡಿಯಿಲ್ಲ. ಆದರೆ ಇಡೀ ಪಟ್ಟಣಕ್ಕೆಲ್ಲ ಪ್ರಾಣಪದಕವಾದ ವಿಶ್ವನಾಥ ಮಂತ್ರಿಗಳನ್ನು ತಿರುಗಿ ರಾಜಧಾನಿಗೆ ಕರೆದುಕೊಂಡು ಬನ್ನಿರಿ! ಇನ್ನು ಮೇಲೆ ಈ ನರಾಧಮನ ಹವ್ಯಾಸವನ್ನು ಬಿಟ್ಟುಬಿಡಿರಿ! ನಿಮ್ಮನ್ನು ಸಂಪೂರ್ಣವಾಗಿ ರಸಾತಲಕ್ಕೆ ಮೆಟ್ಟಿ ಪಟ್ಟಣದ ತುಂಬ ಕಲಹವನ್ನು ಬೆಳಿಸಿದ ಈ ಚಾಂಡಾಲನನ್ನು ಮೊದಲು ರಾಜ್ಯದಿಂದ ಹೊರದೂಡಿರಿ. ಈ ಪಾತಕಿಯ ಮಾಯಾಜಾಲದಿಂದ ಪಟ್ಟಣವೆಲ್ಲ ಹಾಳಾಗಿ ಹೋಗಿದೆ. ವಿಚಾರ ಮಾಡಿರಿ! ನಾನು ನಿಮ್ಮ ಮಗಳಲ್ಲವೇ? ನನಗಾಗುವ ಅಪಮಾನವನ್ನು ಪ್ರತ್ಯಕ್ಷ ನೋಡಬಯಸುವಿರಾ?" ಎಂದು ಕನಿಕರದಿಂದ ನುಡಿದಳು.

ಮಗಳ ಉಪದೇಶಾಮೃತವು ನಾಟಿತೇನೋ? ಶಂಕರರಾಯನು ಕೂಡಲೆ ವಿಲಾಸಕುಮಾರನ ಮೇಲೆ ಕೆರಳಿದ ಸಿಂಹನಂತೆ ಎರಿ ಹೋಗಿ "ಅಧಮಾ! ಈ ನಿನ್ನ ಕಪಟತಂತ್ರದಲ್ಲಿ ನನ್ನನ್ನು ಹಾಕಿ ನನ್ನ ಮಗಳ ಮೇಲೆ ಬಲಾತ್ಕಾರ ಮಾಡಲೆಣ್ಣಿಸಿದೆಯಾ" ಎಂದು ಗರ್ಜಿಸಿ ಅವನನ್ನು ಚಂಡಿಗೆ ಕೈಕೊಟ್ಟು ಹೊರದೂಡಿದನು.

ಕೂಡಲೆ ವಿಲಾಸಕುಮಾರನು ಮೊದಲೇ ಒಡಕು ಹುಟ್ಟಿಸಿ ತನ್ನದಾಗಿ ಮಾಡಿಟ್ಟ ಒಂದು ಸೇನೆಯನ್ನು ತೆಗೆದುಕೊಂಡು ಬಂದು ಶಂಕರರಾಯನನ್ನು ಕೈದು ಮಾಡಿಸಿ ಎಳೆದೊಯ್ದನು

ಇನ್ನು ಇಲ್ಲಿ ಇದ್ದರೆ ಒಳಿತಾಗಲಿಕ್ಕಿಲ್ಲೆಂದು ತಿಳಿದು ಕಮಲಾದೇವಿಯು ರಾಜಧಾನಿಯನ್ನು ಬಿಟ್ಟು ಮೆಲ್ಲಗೆ ಪಾರಾಗಿ ಚಂದ್ರಾವತಿ ಎಂಬ ಹಳ್ಳಿಗೆ ಹೋದಳು.

೩

ಇತ್ತ ವಿಶ್ವನಾಥ ಮಂತ್ರಿಗಳೂ ಮುಕುಂದನೂ ರಾಜಧಾನಿಯನ್ನು ಬಿಟ್ಟು ಬಂದಂದಿನಿಂದ ಗುಪ್ತವೇಷ ಧಾರಣಮಾಡಿಕೊಂಡು ಚಂದ್ರಾವತಿಯಲ್ಲಿಯೇ ಬಂದಿದ್ದರು ಇವರ ಕಡೆಗೆ ಜನಬಲವಾಗಲೀ ಧನಬಲವಾಗಲೀ ಏನೂ ಇಲ್ಲದ್ದರಿಂದ ತಮ್ಮ ಅಸ್ತ್ರಗಳನ್ನು ಬದಿಗಿಟ್ಟು ಗುಪ್ತವೇಷ ಧಾರಣಮಾಡಿಕೊಂಡು ಶಾಂತ ರೀತಿಯಿಂದ ಕೆಲಸ ಮಾಡಬೇಕಾಗಿತು. ಅವರು ದಿನಾಲು ಹಳ್ಳಿ ಹಳ್ಳಿಗೆ ಹೋಗಿ ವಿಲಾಸಕುಮಾರನ ಮಾಟದಿಂದ ಅಲ್ಲಲ್ಲಿ ಜನರಲ್ಲಿ ಬಳೆವ ಸೆರೆಸಿಂದಿಯ ಚಟವನ್ನು ದೂರುಮಾಡುವದಕ್ಕೆ ಆರಂಭಮಾಡಿದ್ದರು. ಎಲ್ಲರಿಗೂ ಅದರ ದುಷ್ಪರಿಣಾಮಗಳನ್ನು ತಿಳಿ ಹೇಳಿ ಮನಗಾಣಿಸಿಕೊಟ್ಟು ಅದರಿಂದ ಮುಕ್ತರನ್ನಾಗಿ ಮಾಡಹತ್ತಿದರು.

ಕಮಲಾಕುಮಾರಿಯು ಚಂದ್ರಾವತಿಗೆ ಬಂದು ಎರಡು ದಿನಗಳಾದವು ಅಪ್ಪಾಭಟ್ಟನೆಂಬ ಬ್ರಾಹ್ಮಣನ ಮನೆಯಲ್ಲಿ ಇಳಿದುಕೊಂಡಿದ್ದಳು. ಯಾರೋ ಇಬ್ಬರು ಆ ಊರಲ್ಲಿ ಸರೆ-ಸಿಂದಿಗಳ ದುಷ್ಪರಿಣಾಮದ ಬಗ್ಗೆ ಉಪದೇಶ ಮಾಡಹತ್ತಿದ್ದಾರೆಂದು ಸುದ್ದಿ ಹತ್ತಿತು. ಅಪ್ಪಾಭಟ್ಟರೆ ! ಈ ಊರ ಸುದ್ದಿ ಏನು' ಎಂದು ಕೇಳಿದಳು.

"ಏನು ಹೇಳಲಿ ತಂಗೀ ! ಈ ಊರ ದೈವವು ತೆರೆದಿದೆ ಬರಬರುತ್ತ ಇತ್ತೀಚೆಗೆ ಬ್ರಾಮ್ಹಣರು ಕೂಡ ಸರೆ ಕುಡಿಯಹತ್ತಿದ್ದರು ಮದೋನ್ಮತ್ತರಾಗಿ ದಾನ ಧರ್ಮ, ನಿತ್ಯಕರ್ಮಗಳನ್ನೆಲ್ಲ ಬಿಟ್ಟುಕೊಡಹತ್ತಿದರು. ನಮ್ಮ ದಕ್ಷಿಣೆಗೆ ಕೂಡ ಚಕ್ರ ಬಂದಿತ್ತು. ಆದರೆ ಈಗ

ಹತ್ತಿಪ್ಪತ್ತು ದಿನಗಳ ಲಾಗಾಯ್ತು ಇಬ್ಬರು ಪುಣ್ಯಾತ್ಮರ ಉಪದೇಶ ದಿಂದ ಆ ಚಟವು ನಿರ್ಮೂಲವಾಗಹತ್ತಿದೆ" ಎಂದು ಹೇಳಿದನು. ಆಗ ಅವಳಿಗೆ ಮತ್ತಿಷ್ಟು ಧೈರ್ಯವು ಬಂತು.

"ಅಪ್ಪಾಭಟ್ಟರೇ! ನಾನಾದರೂ ಅದೇ ರೀತಿ ಉಪದೇಶಕರಲ್ಲೊಬ್ಬಳು. ಈ ಸಂಗತಿಯನ್ನು ಯಾರಿಗೂ ತಿಳಿಸಬೇಡಿರಿ. ನಾನೊಂದು ಓಲೆಯನ್ನು ಕೊಡುತ್ತೇನೆ. ದಯವಿಟ್ಟು ಅದನ್ನೊಯ್ದು ಆ ಇಬ್ಬರೂ ಉಪದೇಶಕರ ತಪಾಸು ಹಚ್ಚಿ ಚಿಕ್ಕ ಉಪದೇಶಕನ ಕೈಯಲ್ಲಿ ಕೊಡಿರಿ! ಅಂದರೆ ನನ್ನ ಮೇಲೆ ನಿಮ್ಮದೊಂದು ದೊಡ್ಡ ಉಪಕಾರ ವಾದಂತಾಗುತ್ತದೆ" ಎಂದು ಅವಳು ಬಿನ್ನವಿಸಿಕೊಂಡಳು

'ಆಗಲಿ! ತಾಯೀ ನಿಮ್ಮಂಥ ನಾರೀರತ್ನಗಳು ಈ ರೀತಿ ಕಷ್ಟನಷ್ಟಗಳಿಗೆ ಎದೆಗೊಟ್ಟು, ಜನರನ್ನು ಉದ್ಧಾರ ಮಾಡುವದಕ್ಕಾಗಿ ಯತ್ನಿಸುತ್ತಿರುವಾಗ ನನ್ನಂಥ ಕ್ಷುಲ್ಲಕ ಒಬ್ಬ ಬ್ರಾಹ್ಮಣನು ಈ ಸಣ್ಣ ಕಾರ್ಯವನ್ನು ಮಾಡದೆ ಇದ್ದರೆ ಜನರೇನಂದಾರು?" ಎಂದು ನುಡಿದು ಅಪ್ಪಾಭಟ್ಟನು ಅವಳು ಕೊಟ್ಟ ಓಲೆಯನ್ನು ತೆಗೆದುಕೊಂಡು ಆ ಉಪದೇಶಕರ ತಪಾಸು ಹಚ್ಚುವದಕ್ಕೆ ನಡೆದನು.

ನಿನ್ನಿನ ದಿನವೇ ವಿಶ್ವನಾಥ ಮಂತ್ರಿಗಳನ್ನು ವಿಲಾಸಕುಮಾರನ ಸೈನಿಕರು ಹಿಡಿದೊಯ್ದುದರಿಂದ ಮುಕುಂದನು ಬಹು ಜಾಗರೂಕನಾಗಿ ಇರಬೇಕಾಗಿತ್ತು. ಅವನು ಯಾರಿಗೂ ತಿಳಿಯದಂತೆ ನಿಂಗಯ್ಯನೆಂಬೊಬ್ಬ ಬಡ ಒಕ್ಕಲಿಗನ ಮನೆಯಲ್ಲಿ ಬಂದಿದ್ದನು.

ಅಪ್ಪಾಭಟ್ಟನು ಶೋಧ ಮಾಡಮಾಡುತ್ತ ನಿಂಗಯ್ಯನ ಮನೆಗೆ ಬಂದನು ಆ ನಿಂಗಯ್ಯನ ಪರಿಚಯವು ಅಪ್ಪಾಭಟ್ಟರಿಗೂ ಅಪ್ಪಾಭಟ್ಟರ ಪರಿಚಯವು ನಿಂಗಯ್ಯನಿಗೂ ಚನ್ನಾಗಿದ್ದಿತು.

"ನಿಂಗಾ! ಸೆರೆ ಕುಡಿಯ ಬೇಡಿರೆಂದು ಉಪದೇಶ ಮಾಡುತ್ತ ಮೊನ್ನೆ ತಾನೆ ಬಂದಿದ್ದರಲ್ಲ ಆ ಉಪದೇಶಕರು ಎಲ್ಲಿಇರುತ್ತಾರೆ? ನಿನಗೇನಾದರೂ ಗೊತ್ತುಂಟೋ?" ಎಂದು ಮೆಲ್ಲಗೆ ಅಪ್ಪಾಭಟ್ಟರು ಕೇಳಿದರು.

ನಿಂಗನು ಸ್ವಲ್ಪ ವಿಚಾರದ ಗೊಂದಲದಲ್ಲಿ ಬಿದ್ದ. ಅಪ್ಪಾಭಟ್ಟನ ವಿಷಯವಾಗಿ ಚನ್ನಾಗಿ ಪರಿಚಯವಿದ್ದಿತಾದರೂ ವಿಲಾಸ

ಕುಮಾರನ ಕಾಲವೇ ಅಂತಹದಾಗಿದ್ದಿತು. ಅಣ್ಣತಮ್ಮಂದಿರಲ್ಲಿ ಕೂಡ ವಿಶ್ವಾಸವಿರುತ್ತಿರಲಿಲ್ಲ. ನಿಂಗನಿಗೆ ಬೇರೆ ಭಯವೇನೂ ಇರಲಿಲ್ಲ. ದುಡ್ಡಿನ ಆಶೆಗಾಗಿ ಅಪ್ಪಾಭಟ್ಟನು ವಿಲಾಸಕುಮಾರನ ಗುಪ್ತಚಾರನೆಲ್ಲಿ ಆಗಿದ್ದನೋ ಎಂಬದೊಂದೇ ಭಯ.

"ಯಾಕೆ? ಭಟ್ಟರೆ, ಅವರಲ್ಲಿ ಏನು ಕೆಲಸವಿತ್ತು" ಎಂದು ಕುತೂಹಲ ಭಾವದಿಂದ ಕೇಳಿದ.

''ಏನೂ ಇಲ್ಲ. ಅವರಿಗೊಂದು ಓಲೆ ಕೊಡಬೇಕಾಗಿತ್ತು ?"

"ಯಾರ ಓಲೆ ? ನಮ್ಮ ಹೊಸರಾಜರಾದ ವಿಲಾಸಕುಮಾರರದೇನು ? ಏನೊಳ್ಳೆಯ ಅರಸನವನು" ಎಂದು ಪರೀಕ್ಷೆ ಮಾಡುವದಕ್ಕಾಗಿ ನುಡಿದ.

"ನಿಂಗಾ ! ಯಾವ ಹೊಸರಾಜ ! ವಿಲಾಸಕುಮಾರನಿಗೆ ರಾಜನೆನ್ನಬೇಕೆ? ನಮ್ಮ ಪಟ್ಟಣದ ಮೇಲೆ ಅವನದೇನು ಅಧಿಕಾರವಿರುವದು? ಜನರನ್ನು ದುರ್ಮಾರ್ಗದಿಂದ ದೂರಮಾಡುವದನ್ನು ಬಿಟ್ಟು ಬೇಕೆಂತಲೇ ತನ್ನ ಲಾಭಕ್ಕೋಸುಗ ಮದ್ಯದಂಗಡಿಯನ್ನಿಟ್ಟು ಜನರನ್ನು ದುರ್ಮಾರ್ಗಕ್ಕೆ ಹಚ್ಚುವ ಪಾಪಿಷ್ಠನಿಗೆ ರಾಜನೆನ್ನಬೇಕೆ? ಛೀ, ಆ ಮಾತನ್ನೆತ್ತಬೇಡಾ ! ನೋಡಿದೆಯಾ ? ಚಿಕ್ಕ ಕಂದಮ್ಮನು ಕೂಡ ರಾಜ್ಯವನ್ನು ಧಿಃಕರಿಸಿ ಉಪದೇಶಕಳಾಗಿ ಬಂದಿದ್ದಾಳೆ' ಎಂದು ಅಪ್ಪಾಭಟ್ಟನು ಬಡಬಡನೆ ನುಡಿದು ಬಿಟ್ಟನು.

''ಭಟ್ಟರೆ ! ಯಾವ ಕಂದಮ್ಮ ? ಯಾರ ಓಲೆ ಏನು ಕಥೆ ? ಒಂದಕ್ಕೊಂದು ಸಂಬಂಧವೇ ಇಲ್ಲವಲ್ಲ ? ಸಂಕೋಚಪಡಬೇಡಿ ! ಹೇಳಿ ! ಎಂದು ನಿಂಗನು ಆತುರದಿಂದ ಕೇಳಿದ

"ನಿಂಗಾ! ನೀನು ನಮ್ಮವನೇ ಎಂದು ಹೇಳುತ್ತೇನೆ ನಮ್ಮ ಮನೆಗೆ ಓರ್ವ ತರುಣಿಯು ಬಂದಿದ್ದಾಳೆ. ಅವಳು ಇಲ್ಲಿ ಬಂದ ಉಪದೇಶಕರಲ್ಲಿ ಚಿಕ್ಕ ಉಪದೇಶಕನ ಕೈಯಲ್ಲಿಯೇ ಕೊಡಬೇಕೆಂದು ಒಂದು ಓಲೆಯನ್ನು ಕೊಟ್ಟಿದ್ದಾಳೆ. ಯಾರಿಗೂ ಈ ಸಂಗತಿಯನ್ನು ಹೇಳಬೇಡಾ! ದಯವಿಟ್ಟು ಆ ಉಪದೇಶಕರನ್ನು ಹುಡುಕುವ ಕಾರ್ಯದಲ್ಲಿ ನೀನೂ ನೆರವಾಗುವಿಯಾ?'' ಎಂದು ಬಿನ್ನವಿಸಿಕೊಂಡನು.

ನಿಂಗನ ಸಂಶಯವು ದೂರಾಯಿತು. ಅವನನ್ನು ಒಳಗೆ ಕರೆದುಕೊಂಡು ಹೋದನು. ಮುಕುಂದನ ಭೆಟ್ಟಿಮಾಡಿಸಿದನು. ಮುಕುಂದನ ಕೈಯಲ್ಲಿ ಅಪ್ಪಾಭಟ್ಟನು ಓಲೆಯನ್ನು ಕೊಟ್ಟು ನಮಸ್ಕರಿಸಿದನು. ಮುಕುಂದನು ಭಟ್ಟರಿಂದ ಪೂರ್ವಾಪರ ಸಂಗತಿಗಳನೆಲ್ಲವನ್ನೂ ಕೇಳಿಕೊಂಡು ಓಲೆ ಒಡೆದು ಓದಲಾರಂಭಿಸಿದನು.

ಒಳಿತು. ಶ್ರೀ ಫಾ. ವ. ೧೫

**ಚಂದ್ರಾವತಿ**

**ಪ್ರಾಣನಾಥ !**

ನಿನ್ನನಗಲಿ ಇಂದಿಗೆ ಸುಮಾರು ತಿಂಗಳಾಗುತ್ತ ಬಂದಿತು. ಒಂದು ದಿವಸವೆಂದರೆ ಒಂದು ಯುಗವಾಗಿ ಹೋಗಿದೆ. ನಿನ್ನನ್ನು ಕಾಣಬೇಕೆಂದು ಬಲವಾದ ಅಪೇಕ್ಷೆಯು ನನಗಾಗಿದೆ. ಗುರುವರ್ಯರಾದ ವಿಶ್ವನಾಥ ಮಂತ್ರಿಗಳಿಗೆ ನನ್ನ ನಮಸ್ಕಾರಗಳನ್ನರುಹು ರಾಜಸ್ಥಾನವು ರಣರಂಗವಾದದ್ದರಿಂದ ನಾನಿಲ್ಲಿಗೆ ಬರಬೇಕಾಯಿತು. ಕೂಡಲೆ ಈ ಬ್ರಾಹ್ಮಣನೊಡನೆ ಎಲ್ಲ ಸಮಾಚಾರವನ್ನು ಹೇಳಿಕಳಿಸಬೇಕು. ಪ್ರತ್ಯಕ್ಷ ಬಂದ ನಂತರ ಎಲ್ಲವೂ ವಿದಿತವಾಗುವದು. ನಿನ್ನ ದಾರಿಯನ್ನೇ ನಿರೀಕ್ಷಣ ಮಾಡುತ್ತ ಕುಳಿತ.

ನಿನ್ನ ಸದ್ದು ಮುದ್ದಾದ

**ಕಮಲಿ**

ಮುಕುಂದನು ಖಂಡಿತವಾಗಿಯೂ ಬಂದೇ ಬರುವನೆಂಬ ಭರವಸೆಯ ಮೇಲಿಂದ ಕಮಲಾದೇವಿಯು ರಾಜಧಾನಿಯಲ್ಲಿ ನಡೆದ ಎಲ್ಲ ವಾರ್ತೆಯನ್ನು ಓಲೆಯಲ್ಲಿ ಬರೆದಿರಲಿಲ್ಲ. ಇದೊಂದು ಕಮಲಾದೇವಿಯ ದುರ್ದೈವವೆನ್ನಬೇಕು. ಮುಕುಂದನು ಲಗ್ನದ ಸಲುವಾಗಿಯೇ ಅವಳು ವಿರಹತಾಪವನ್ನು ಸಹಿಸಲಾರದೆ ಅಲ್ಲಿಗೆ ಬಂದಿರಬಹುದೆಂದು ತಿಳಿದುಕೊಂಡನು. ಆದರೆ ಮುಕುಂದನಿಗೀಗ ಮಹೀ ಪಟ್ಟಣದ ಸ್ವಾತಂತ್ರ್ಯ ಸಂಪಾದನೆಯೂ, ಜನತಾಜನಾರ್ದನನ ಸೇವೆಯೂ ಇವೆರಡೇ ಕಣ್ಣುಮುಂದೆ ಕಟ್ಟಿದಂತಾಗಿ ಹೋಗಿದ್ದವು. ಲಗ್ನದ ಆಶೆಯು

ರಲಿಲ್ಲ. ಕಮಲೆಯ ಓಲೆಗೆ ಒಂದು ಮಾರೋಲೆಯನ್ನು ಬರೆದು ಅಪ್ಪಾಭಟ್ಟನ ಕೈಯಲ್ಲಿ ಕೊಟ್ಟು ಕಳಿಸಿದ.

ರಾಜಸ್ಥಾನದಲ್ಲಿ ವಿಲಾಸಕುಮಾರನ ಪುಂಡಾಟಿಕೆಗೆ ಮಿತಿಯೇ ಇಲ್ಲದಂತಾಗಿತ್ತು. ವಿಲಾಸಕುಮಾರನು ವಿಶ್ವನಾಥ ಮಂತ್ರಿಗಳನ್ನೂ ಶಂಕರರಾಯನನ್ನೂ ಗಲ್ಲಿಗೇರಿಸುವ ಬಗ್ಗೆ ಹಸ್ತಪತ್ರಿಕೆಗಳನ್ನು ಅಲ್ಲ ಲ್ಲಿಗೆ ಹಂಚಿಸಿದನು. ಮುಕುಂದನನ್ನೂ ಕಮಲೆಯನ್ನೂ ಹುಡುಕು ವದಕ್ಕಾಗಿ ನೋಡಿನೋಡದಲ್ಲೆಲ್ಲ ಗುಪ್ತಚಾರರನ್ನು ಕಳಿಸಿಕೊಡಹತ್ತಿದ.

ತಂದೆಯನ್ನು ಗಲ್ಲಿಗೇರಿಸುವ ಸುದ್ದಿಯನ್ನು ಕೇಳಿ ಮುಕುಂದನ ಜೀವ ಕಳವಳಿಸಿತು. ಮಾಡುವದೇನು? ಪಾಪ! ಇಂಥ ನೀಚ ಅರ ಸನ ಕ್ರೂರ ಕೃತ್ಯಗಳು ಯಾರಿಗೆ ತಾನೆ ಕೆಡಕೆನಿಸಲಿಕ್ಕಿಲ್ಲ? ತಂದೆ ಯನ್ನು ಗಲ್ಲಿಗೇರಿಸುವ ಸುದ್ದಿಯನ್ನು ಕೇಳಿ ಮಗನು ಎಂದಾದರೂ ಸುಮ್ಮನಿರಲಾದೀತೇ?" ಮುಕುಂದನ ತಲೆಯಲ್ಲಿ ಆವೇಶ ತುಂಬಿತು. ತನ್ನ ಖಡ್ಗವನ್ನು ಒರೆಯಿಂದ ಹಿರಿದುಕೊಂಡು ಯುದ್ಧಕ್ಕೆ ಸಿದ್ಧನಾಗಿ ಹೊರಟನು. ಗಲ್ಲಿಗೇರಿಸುವ ಸ್ಥಳಕ್ಕೆ ಬಂದು ಸಡ್ಡು ಹೊಡೆದು ನಿಂತು ಕತ್ತಿಯನ್ನು ತಿರುವಲಾರಂಭಿಸಿದನು. ಹತ್ತು ನಿಮಿಷಗಳ ವರೆಗೆ ಒಂದೇ ಸವನೆ ಕಾದಾಡಿ ಮೂವತ್ತೈದು ಜನರ ಸಂಹಾರ ಮಾಡಿದನು. ಅವನಿಗೆ ಬಹಳ ದಣುವಾಯಿತು. ಸುತ್ತಲೂ ನೂರಾರು ಸೈನಿಕರು ಒಮ್ಮೆಲೆ ಬಂದು ಅವನನ್ನು ಹಿಡಿದು ಕಟ್ಟಿಹಾಕಿದರು. ಮುಕುಂದನ ಪರಾಕ್ರಮವನ್ನು ಕಂಡು ಎಲ್ಲರೂ ಬೊಟ್ಟು ಕಚ್ಚಿಕೊಂಡರು. ಗಲ್ಲಿಗೇರು ವಾಗ ಶಂಕರರಾಯ ವಿಶ್ವನಾಥ ಮಂತ್ರಿಗಳಿಬ್ಬರೂ "ಭಾಪು! ಭಾಪು! ಮುಕುಂದಾ ನಿನ್ನಂಥ ಸ್ವದೇಶಾಭಿಮಾನಿಗಳಾದ ಗಂಡುಗಲಿಗಳಿಂದಲೇ ಈ ಮಹೀಪಟ್ಟಣವು ಉದ್ಧಾರವಾಗುವದು!" ಎಂದು ಉದ್ಗಾರವನ್ನು ತೆಗೆದು ಸ್ವರ್ಗಕ್ಕೆ ತೆರಳಿದರು.

ಕಮಲಾದೇವಿಯು ಅಪ್ಪಾಭಟ್ಟನ ನಿರೀಕ್ಷಣೆಯನ್ನೇ ಮಾಡುತ್ತ ಕುಳಿತುಕೊಂಡಿದ್ದಳು. ಅಪ್ಪಾಭಟ್ಟನು ಬಂದು, ಓಲೆಯನ್ನು ಕೊಟ್ಟನು. ಒಡೆದು ನೋಡಿದಳು. ಕೆಳಗೆ ಬರೆದಂತೆ ಅದರಲ್ಲಿ ಕಾಣಿಸಿತ್ತು.

ಷ್ಟೈ. ಶು. ೨
**ಚಂದ್ರಾವತಿ**

**ಪ್ರಿಯ ಕಮಲಾಕುಮಾರಿ!**

ನನ್ನ ಹವ್ಯಾಸನ್ನು ಬಿಟ್ಟು ಬಿಡು ಸುಖದ ಆಶೆಯು ನನಗಿಲ್ಲ; ನಿನ್ನೆ ನಮ್ಮ ತಂದೆಯವರನ್ನು ಹಿಡಿದೊಯ್ದರು. ನಾನಾದರೂ ಇಂದಿಲ್ಲ ನಾಳೆ ಆ ಮದಾಂಧ ವಿಲಾಸಕುಮಾರನ ಕೈವಶನಾಗತಕ್ಕವನೇ! ಯಾರ ದಾದರೂ ಕೈಹಿಡಿದು ಸುಖವಾಗಿರು! ಮಹೀಪಟ್ಟಣವು ಸ್ವತಂತ್ರವಾಗಿ ಬಡವರು ಸುಖವಾಗಿರುವವರೆಗೂ ನಾನು ಮದುವೆಯನ್ನು ಮಾಡಿ ಕೊಳ್ಳಬಾರದೆಂದು ನಿಶ್ಚಯಿಸಿರುವೆನು ವ್ಯರ್ಥವಾಗಿ ನನ್ನ ಸಲು ವಾಗಿ ಕಷ್ಟಪಡಬೇಡ.

ಇಂತು ಬಿನ್ನವಿಸಿಕೊಳ್ಳುವ ನಿನ್ನ
**ಮುಕುಂದ**

ಕಮಲಾದೇವಿಗೆ ಓಲೆಯನ್ನು ಓದಿ ದುಃಖವಾಯಿತು ದುಃಖದ ಭರದಲ್ಲಿಯೇ ಇನ್ನೊಂದು ಓಲೆ ಬರೆಯಬೇಕೆಂದು ಆರಂಭ ಮಾಡಿ ದಳು. ಬರೆಯುವಾಗ ಕೈಯಲ್ಲಿಯ ಲೆಕ್ಕಣಿಕೆಯು ಕಳಚಿ ಕೆಳಗೆ ಬಿದ್ದಿತು. ಅಪಶಕುನವಾಯಿತೆಂದು ತಿಳಿದು ಆವಳಿಗೆ ಮತ್ತಿಷ್ಟು ದುಃಖವಾಯಿತು. ಅವಳ ಸಂಶಯವು ಸುಳ್ಳಾಗಲಿಲ್ಲ ಅಷ್ಟರಲ್ಲಿಯೇ ಯಾರೋ ಒಬ್ಬರು ಬಂದು ಶಂಕರರಾಯ ವಿಶ್ವನಾಥ ಮಂತ್ರಿಗಳ ಸಂಗತಿಯನ್ನೂ, ಮುಕುಂದನು ಕಾದಾಡಿ ಕಾದಾಡಿ ವಿಲಾಸನ ಕೈವ ಶವಾದದ್ದನ್ನೂ ತಿಳಿಸಿದರು. ಇದೆಲ್ಲವನ್ನು ಕೇಳಿ ಕಮಲಾದೇವಿಯ ಎದೆಗೆ ಸಿಡಿಲು ಬಡಿದಂತಾಯಿತು ಅವಳಿಗೆ ಗಾಯದ ಮೇಲೆ ಬರೆ ಎಳೆದಂತಾಯಿತು. ಆದರೆ ಮಾಡುವದೇನು? ವೀರ ಸ್ತ್ರೀಯರು ಈ ರೀತಿ ರೋದಿಸುತ್ತ ಕುಳಿತರೆ ಕಾರ್ಯವಾಗುವದೋ? ಪ್ರಾಣವಿರುವ ಪರ್ಯಂತರ ಸರ್ವಸ್ವವು ಹೋದರೂ ಆ ರಾಜಪುತ್ರಿಯ ಶೌರ್ಯದ ಗಟ್ಟಿ ಕರಗಲಿಲ್ಲ. ಅವಳು ಅಲ್ಲಿಂದ ಚಟ್ಟನೆ ಎದ್ದು ಪುರುಷ ವೇಷ ಧಾರಣ ಮಾಡಿಕೊಂಡಳು. ಅಪ್ಪಾಭಟ್ಟನಿಂದ ತನಗೆ ಅನುಕೂಲ ವಾಗುವ ಎಲ್ಲ ಜನರನ್ನೂ ಕರಿಸಿದಳು. ಎಲ್ಲರಿಂದಲೂ ಒಕ್ಕಟ್ಟಿನಿಂದ

ಇರುವ ಪ್ರತಿಜ್ಞೆಯನ್ನು ತೆಗೆದುಕೊಂಡು ಊರೂರು ಅಡ್ಡಾಡಿ ಪ್ರತಿಯೊಂದು ಕಡೆಯಿಂದ ಜನಸಂಗ್ರಹವನ್ನೂ ಧನಸಂಗ್ರಹವನ್ನೂ ಮಾಡ ಹತ್ತಿದಳು. ಸುಮಾರು ಎರಡು ತಿಂಗಳೊಳಗೆ ಆರೇಳು ನೂರು ಜನರನ್ನು ಕೂಡಿಸಿ ಅವರಿಗೆಲ್ಲ ಸ್ವತಃ ತಾನೇ ಯುದ್ಧಕಲೆಯನ್ನು ಕಲಿಸಿದಳು. ನೆರೆಸಿಂದಿಗಳನ್ನು ಜನರು ಮುಟ್ಟದಂತೆ ವ್ಯವಸ್ಥೆ ಮಾಡಿದಳು.

೪

ವಿಲಾಸಕುಮಾರನಿಗೆ ಮದ್ಯದ ವ್ಯಾಪಾರವೇ ಕಟ್ಟಾಯಿತೆಂಬದೊಂದು ದೊಡ್ಡ ಚಿಂತೆ. ಇತ್ತೀಚೆಗೆ ಕಮಲಾದೇವಿಯ ಉಪದೇಶದಿಂದ ಮದ್ಯದ ಮಾರಾಟಕ್ಕೆ ಸಂಪೂರ್ಣ ಚಕ್ರವೇ ಬಂದಿತ್ತು. ಮೇಲಾಗಿ ಕಮಲಾದೇವಿಯು ಯುದ್ಧದ ಸಿದ್ಧತೆಯನ್ನು ನಡೆಸಿರುವಳೆಂದು ತಿಳಿಯಿತು. ಇದರಿಂದ ವಿಲಾಸಕುಮಾರನು ಹೌಹಾರಿದನು. ಅವನ ಎದೆಯೊಡೆದು ನೀರಾಯಿತು. ಗಾಬರಿಗೊಂಡು ಇನ್ನೂರು ಜನರದೊಂದು ಚಿಕ್ಕ ದಂಡನ್ನು ಅವಳನ್ನು ಹಿಡಿತರುವದಕ್ಕೆ ಕಳಿಸಿದನು. ಆದರೆ ಆ ದಂಡು ಹೋದದ್ದು ತಿರುಗಿ ಬರಲೇ ಇಲ್ಲ ಅದೇನು ಕಮಲಾದೇವಿಯ ಸೈನಿಕರ ಖಡ್ಗಗಳಿಗೆ ಆಹುತಿಯಾಯಿತೋ? ಅಥವಾ ಕಮಲಾದೇವಿಯ ಸೈನ್ಯಕ್ಕೆ ಸೇರಿಕೊಂಡು ಬಿಟ್ಟಿತೋ? ತಿಳಿಯಲೇ ಇಲ್ಲ ವಿಲಾಸಕುಮಾರನು ಮತ್ತಿಷ್ಟು ಗಾಬರಿಗೊಂಡನು ಇನ್ನು ಅವನಿಗೆ ಕಮಲಾದೇವಿಯನ್ನು ಮೋಸಗೊಳಿಸುವ ಮಾರ್ಗದ ಹೊರ್ತು ಬೇರೆ ಯಾವ ಮಾರ್ಗವೂ ಕಾಣಲಿಲ್ಲ. ಯಾವರೀತಿಯಿಂದ ಮೋಸಗೊಳಿಸಬೇಕೆಂದು ತನ್ನ ಕುಟಿಲಗಾರರ ಕೂಟದೊಡನೆ ಆಲೋಚಿಸಿದ. ಕೂಟದವರ ನಿರ್ಣಯದಂತೆ ಕಮಲಾದೇವಿಯ ಕಡೆಗೆ ತನ್ನ ದೂತನನ್ನು ಕಳಿಸಿದ.

ಈಗಾಗಲೇ ಕಮಲಾದೇವಿಯು ತುಂಬಾ ಸೈನ್ಯವನ್ನು ಸಜ್ಜುಗೊಳಿಸಿದ್ದಳು. ಒಂದೆರಡು ದಿನಗಳಲ್ಲಿ ಯುದ್ಧಕ್ಕೆ ಹೊರಡತಕ್ಕವಳೇ ಆದರೆ ಇಷ್ಟರಲ್ಲಿಯೇ ವಿಲಾಸಕುಮಾರನ ದೂತನು ಬಂದನು.

"ಮಹಾರಾಣಿಯವರೇ, ಸಲಾಂ ಮಾಡಿದ್ದೇನೆ, ವಿಲಾಸಕುಮಾರರು ಪಶ್ಚಾತ್ತಾಪಗೊಂಡು ನನ್ನನ್ನು ತಮ್ಮ ಬಳಿಯಲ್ಲಿ ಕಳಿಸಿದ್ದಾರೆ." ಎಂದು ದೂತನು ಕನಿಕರ ಬೆರೆತ ದನಿಯಿಂದ ನುಡಿದನು.

"ಏನೇನು ಹೇಳಿದ್ದಾರೆ? ನಿಜವಾಗಿಯೂ ಪಶ್ಚಾತ್ತಾಪವಾಗಿರುವದೊ?

"ಆಹುದು ಮಹಾರಾಜ್ಞಿಯವರೇ! ನಿಜವಾಗಿಯೂ ಪಶ್ಚಾತ್ತಾಪ ಹೊಂದಿರುವರು. ಅವರು ನಿಮ್ಮ ಪಟ್ಟಣದಲ್ಲಿ ಮಾಡಿದ ಅನ್ಯಾಯಗಳ ಸಲುವಾಗಿ ನೀವು ಯಾವ ಶಿಕ್ಷೆ ವಿಧಿಸಿದರೂ ಅದನ್ನು ಸಹಿಸಲಿಕ್ಕೆ ಸಿದ್ಧರಾಗಿದ್ದಾರಂತೆ. ನಿಮ್ಮನ್ನು ಕಂಡು ನಿಮ್ಮ ರಾಜ್ಯವನ್ನು ನಿಮಗೆ ಒಪ್ಪಿಸಿ ನಿಮ್ಮಡಿಗಳ ಮೇಲೆ ತಮ್ಮ ಪ್ರಾಣವನ್ನಿಡಬೇಕೆಂದು ಅವರಿಗೆ ಅಪೇಕ್ಷೆಯಾಗಿದೆ. ಅದಕ್ಕಾಗಿ ಕೂಡಲೆ ತಮ್ಮನ್ನು ಕರೆದು ಕೊಂಡು ಬರಲಿಕ್ಕೆ ಆಜ್ಞಾಪಿಸಿದ್ದಾರೆ"

ಕಮಲಾಕುಮಾರಿಗೆ ಆ ದೂತನ ಮಾತುಗಳು ವಿಶ್ವಸನೀಯವಾಗಿ ಕಂಡವು. ಆದರೂ ತನ್ನ ಸಂರಕ್ಷಣೆಗಾಗಿ ಒಂದು ಖಡ್ಗವನ್ನು ಹತ್ತಿರ ಇಟ್ಟುಕೊಂಡದ್ದಲ್ಲದೆ ಮೂರು ನಾಲ್ಕು ಜನ ವಿಶ್ವಾಸಿಕ ಗಂಡುಗಲಿಗಳನ್ನು ಜೊತೆಗೆ ಕರೆದುಕೊಂಡು ಆ ದೂತನೊಡನೆ ಅರಮನೆಗೆ ಬಂದಳು.

ಹೊರಗೆ ಝುಗಝುಗ, ಒಳಗೆ ಭಗಭಗ ಎಂಬಂತೆ ವಿಲಾಸಕುಮಾರನು ತನಗೆ ನಿಜವಾಗಿಯೇ ಪಶ್ಚಾತ್ತಾಪವಾಗಿದೆಯೆಂದು ಅವಳಿಗೆ ತೋರುವಂತೆ ವರ್ತಿಸುತ್ತ ಅವಳನ್ನು ಬಹಳೇ ಆದರಾತಿಥ್ಯಗಳಿಂದ ಸಭಾಮಂಟಪಕ್ಕೆ ಕರೆದೊಯ್ದನು. ಕಮಲಾದೇವಿಯು ಒಳಗೆ ಹೋಗುವದೊಂದೇ ತಡ; ಹೊರಗೆ ವಿಲಾಸಕುಮಾರನ ಎಲ್ಲ ಸೈನ್ಯವೂ ಸಿದ್ಧವಾಗಿ ಬಂದು ನಿಂತಿತು. ವಿಲಾಸಕುಮಾರನು ಹೊರಗೆ ತೋರಿದ ಆದರಾತಿಥ್ಯವು ಒಳಗೆ ಇರಲಿಲ್ಲ. ಕಮಲಾದೇವಿಗೆ ಕೂಡಲಿಕ್ಕೆ ಆಸನವನ್ನು ಕೂಡ ಕೊಡಲಿಲ್ಲ.

"ಏನು! ಕಮಲೇ! ಇನ್ನಾದರೂ ನನ್ನ ವಶಳಾಗುವಿಯೋ ಇಲ್ಲವೋ? ನನ್ನೊಡನೆ ಲಗ್ನವಾಗಲಿಕ್ಕೆ ಸಿದ್ಧಳಿದ್ದರೆ ಎಲ್ಲ ರಾಜ್ಯವನ್ನು ನಿನಗೆ ಒಪ್ಪಿಸಿ ಬಿಡುವೆನು? ನೀನು ಒಪ್ಪದಿದ್ದರೆ ನಿನ್ನ ಪ್ರಾಣವನ್ನು ತಗೆದುಕೊಂಡೇನು. ಜೀವ ಬೇಕಿದ್ದರೆ ಒಪ್ಪಿಕೋ" ಎಂದು ಬಲಾತ್ಕಾರಯುಕ್ತವಾಣಿಯಿಂದ ನುಡಿದನು.

"ಮೋಸಗಾರಾ! ವಿಲಾಸಾ! ನೀನು ಕರೆಕಳುಹಿಸಿದಾಗಲೇ ಇದರಲ್ಲಿ ಮೋಸಗಾರಿಕೆ ಇರಬಹುದೆಂದೆನಿಸಿತು. ಆದರೆ ಯಾವ ಭೂಮಿತಾಯಿಯ ಉಪ್ಪು ಉಂಡಿರುವನೋ ಆ ಭೂಮಿತಾಯಿಯ ಕೇಡನ್ನು ನೀನು ಕಳಿಸಿದ ಆ ದೂತನು ಬಗೆಯಲಿಕ್ಕಿಲ್ಲವೆಂದು ತಿಳಿದು ಆ ದೂತನ ಮಾತಿನ ಮೇಲೆ ಭರವಸೆಯಿಂದ ಬಂದೆನು. ಆಗಲಿ! ಮೋಸಮಾಡು! ಇದಕ್ಕೆ ನಾನು ಬೆದರತಕ್ಕವಳಲ್ಲ. ಮಾನವನ್ನು ಕೊಟ್ಟು ಪ್ರಾಣವನ್ನು ಕೊಳ್ಳುವ ಹೇಡಿಯು ನಾನಲ್ಲ! ಅಧಮಾ! ಇನ್ನೊಮ್ಮೆ ಈ ರೀತಿ ಮಾತನಾಡಿದರೆ ನಿನ್ನ ನಾಲಿಗೆಯನ್ನು ಸೀಳಿ ಬಿಟ್ಟೇನು! ಜೋಕೆಯಿಂದಿರು" ಎಂದು ಧೈರ್ಯದಿಂದ ನುಡಿದಳು

"ಕಮಲಾಕುಮಾರಿ! ಆವೇಶದ ಭರದಲ್ಲಿ ಏನಾದರೊಂದು ಬೊಗಳಬೇಡ! ನಾನೆಂದರೇನು ತಿಳಿದಿರುವಿ? ಬಲಿಷ್ಠ ಅರಸನಾದ ನನ್ನ ಮುಂದೆ ನಿಂತು ಈ ರೀತಿ ಅವಮಾನಾಸ್ಪದವಾದ ಮಾತನ್ನು ನುಡಿಯುವಿಯಾ? ನೋಡು ನನ್ನ ಜಾಗರೂಕತೆಯನ್ನು. ನಿನ್ನನ್ನು ಬೇಟೆಯಾಡುವದರ ಸಲುವಾಗಿ ಹೊರಗೆ ಹೇಗೆ ನನ್ನ ಸೈನಿಕರು ಸಿದ್ಧರಾಗಿ ನಿಂತಿದ್ದಾರೆ?" ಕಂಡೆಯಾ? ಎಂದು ಮದದಿಂದ ಯುಕ್ತನಾಗಿ ಸೈನಿಕರ ಕಡೆಗೆ ಕೈ ಮಾಡಿ ನುಡಿದನು.

ಕಮಲಾಕುಮಾರಿಯು ಅವನ ಯಾವ ಬೆದರಿಕೆಗೂ ಸೊಪ್ಪು ಹಾಕಲಿಲ್ಲ.

"ವಿಲಾಸಕುಮಾರ! ಈ ನಿನ್ನ ಮೋಸಗಾರಿಕೆಗೆ ಜಾಗರೂಕತೆ ಎನ್ನುತ್ತಾರೊ? ಷಂಡಾ! ಕೈಲಾಗದ ಹೇಡಿ! ನಿನಗೆ ಅರಸನೆಂದ ಯಾರೆನ್ನಬೇಕು? ಅರಸನೆಂದರೇನೆಂದು ತಿಳಿದಿರುವಿ? ಬರೀ ವಜ್ರವೈಡೂರ್ಯ ಮೊದಲಾದ ಆಭರಣಗಳನ್ನು ಧರಿಸಿಕೊಂಡು ಉತ್ತಮೋತ್ತಮವಾದ ಜರತಾರೀ ಬಟ್ಟೆಗಳನ್ನು ಧರಿಸಿಕೊಂಡು ಮೆರೆದರೆ ಅರಸನೆನ್ನುತ್ತಾರೊ? ಪ್ರಜೆಗಳ ಕಲ್ಯಾಣದ ಕಡೆಗೆ ಲಕ್ಷಗೊಡದೆ ಅವರಿಗೆ ದಿನವೊಂದಕ್ಕೆ ಬೇರೆ ಬೇರೆ ವ್ಯಸನಗಳನ್ನು ಕಲಿಸುತ್ತ ತಮ್ಮ ಬೊಕ್ಕಸವನ್ನು ತುಂಬಿಕೊಳ್ಳುವವರಿಗೆ ಅರಸರೆನ್ನುತ್ತಾರೋ? ತನ್ನ ಮತ್ತು ತನ್ನ ಪರಿವಾರದವರ ಸುಖವಿಲಾಸಗಳಿಗೆ ಪ್ರಜೆಗಳ ಮೇಲೆ

ಹೊಸ ಹೊಸ ಕರಾರುಗಳನ್ನು ಕೂಡ್ರಿಸುತ್ತ, ಪ್ರಜೆಗಳನ್ನು ಉಪವಾಸ ವನವಾಸ ಸ್ಥಿತಿಯಲ್ಲಿ ತರುವ ಪಾತಕಿಗಳಿಗೆ ಅರಸನೆನ್ನುವರೋ? ಪಾಪೀ ಮೋಸಗೊಳಿಸಿ ನನ್ನ ಪ್ರಾಣವನ್ನು ತೆಗೆದುಕೊಂಡ ಮಾತ್ರಕ್ಕೆ ನೀನು ಚಿರಂಜೀವಿಯಾದೆಯೆಂದು ತಿಳಿಯಬೇಡಾ! ಇಂಥ ಅನ್ಯಾಯದ ರಾಜ್ಯವು ಬಹುಕಾಲ ಎಂದಿಗೂ ಬಾಳಲಾರದು ಬಲ್ಲಿಯಾ? ಲಕ್ಷದ ಲ್ಲಿಡು! ಇಂದಿಲ್ಲ ನಾಳೆಯಾದರೂ ಈ ಮಹೀಪಟ್ಟಣವು ಸ್ವತಂತ್ರವಾಗಿ ಪ್ರಜೆಗಳು ಸುಖದಿಂದ ಇರುವ ಪ್ರಸಂಗವು ಬಂದೇಬರುತ್ತದೆ ನೀಚಾ! ನೀನು ಮಾತ್ರ ನನ್ನಂಥ ಸ್ತ್ರೀಯರಿಂದಲೇ ಒದತ ತಿಂದು ಸಾಯದೆ ಇರಲಾರಿ'' ಎಂದು ನುಡಿದಳು.

" ಏನು ನೋಡುತ್ತೀರಿ! ಹೊಡೆಯಿರಿ ಇವಳನ್ನು. ಇವಳ ಸೊಕ್ಕನ್ನು ಇಳಿಸಿರಿ" ಎಂದು ಸೈನಿಕರನ್ನು ಕುರಿತು ವಿಲಾಸಕುಮಾರನು ಆರ್ಭಟಿಸಿದನು.

" ಬನ್ನಿರಿ! ಯಾರು ನನ್ನನ್ನು ಹೊಡೆಯತಕ್ಕವರು. ಮುಂದೆ ಬನ್ನಿರಿ! ಈ ನಾರೀಮಣಿಯು ಬೇಕಾದಷ್ಟು ಜನರು ಯುದ್ಧಕ್ಕೆ ಬಂದರೂ ಸಿದ್ಧಳಿದ್ದಾಳೆ. ನನ್ನನ್ನು ಕೊಂದರೂ ಪರವೆಯಿಲ್ಲ. ಆದರೆ ನೀವು ಪರಕೀಯನಾದ ಈ ವಿಲಾಸಕುಮಾರನ ಮಾತನ್ನು ಕೇಳಿ ನಿಮ್ಮ ಭೂಮಿತಾಯಿಯ ಋಣವನ್ನು ತೀರಿಸುವದನ್ನು ಮಾತ್ರ ಮರೆಯಬೇಡಿರಿ! ಯಾವ ಭೂಮಿತಾಯಿಯ ಉಪ್ಪನ್ನು ಉಂಡಿರುವಿರೊ ಅವಳನ್ನು ದುಃಖಕ್ಕೀಡು ಮಾಡಿ ದಾಸ್ಯತ್ವದಲ್ಲಿ ಕೊಳೆಯ ಹಾಕಿ ಅಧಿಕಾರ ಮದದಲ್ಲಿ ಮನಬಂದಂತೆ ನಡೆಯದೆ ಇಂದಿಲ್ಲ ನಾಳೆಯಾದರೂ ಅವಳ ಋಣವನ್ನು ತೀರಿಸಿರಿ" ಎಂದು ಅವರಿಗೆ ಸಂದೇಶಯುಕ್ತವಾದ ವಾಣಿಯಿಂದ ಹೇಳಿ ಕತ್ತಿಯನ್ನು ತಿರುವಲಾರಂಭಿಸಿದಳು.

ಕೆಚ್ಚೆದೆಯ ಕುಮಾರಿಯ ಸ್ಫೂರ್ತಿದಾಯಕವಾದ ವಾಣಿಯು ಎಲ್ಲರ ಮನದಲ್ಲಿಯೂ ಅಂಟಿಕೊಂಡಿತು. ಒಬ್ಬರೂ ಮುಂದಕ್ಕೆ ಬರಲಿಲ್ಲ. ಒಬ್ಬೊಬ್ಬರೇ ತಮ್ಮ ಖಡ್ಗವನ್ನು ಕೆಳಗಿಟ್ಟು ಕಮಲಾದೇವಿಗೆ ನಮಸ್ಕಾರ ಮಾಡಹತ್ತಿದರು ವಿಲಾಸಕುಮಾರನ ಎದೆಯೊಡೆದು ಹೋಯಿತು. ಕಕ್ಕಾವಿಕ್ಕಿಯಾದನು. ಇನ್ನು ಇಲ್ಲಿಯೇ ನಿಂತರೆ ತನ್ನ

ಪ್ರಾಣವು ಉಳಿಯಲಿಕ್ಕಿಲ್ಲವೆಂದು ತಿಳಿದು ಓಡಿಹೋಗ ಬಯಸಿ ಒಂದೊಂದೇ ಹೆಜ್ಜೆಯನ್ನಿಡಹತ್ತಿದನು. ಕೂಡಲೆ ಸೈನಿಕರಲ್ಲಿಬ್ಬರು ಅವನನ್ನು ಹಿಡಿದು ಕಟ್ಟಿ ಕಮಲಾದೇವಿಯ ಮುಂದೆ ತಂದು ನಿಲ್ಲಿಸಿದರು.

"ನಿನಗೆ ಯಾವ ಶಿಕ್ಷೆ ಕೊಡಬೇಕು ಹೇಳು! ದುಷ್ಟಾ! ಜಿಗಳಿಯಂತೆ ಬಡವರ ರಕ್ತವನ್ನು ಹೀರುವ ನಿಮ್ಮಂಥ ನೀಚ ಅರಸರನ್ನು ಕಡಿದು ಚೂರು ಚೂರು ಮಾಡಿದರೂ, ಜೀವಂತ ಹುಗಿಸಿದರೂ, ಕಾಯ್ದ ಎಣ್ಣೆಯಲ್ಲಿ ಹಾಕಿದರೂ ನೀನು ಮಾಡಿದ ಅನ್ಯಾಯದ ದೋಷವು ಹೋಗುವದಿಲ್ಲ" ಎಂದು ನುಡಿದಳು.

ಸಂಕಟ ಬಂದಕಾಲಕ್ಕೆ ವೆಂಕಟರಮಣ ಎಂಬುವದು ಸುಳ್ಳಲ್ಲ. ವಿಲಾಸಕುಮಾರನು ಜೀವ ಉಳಿಸಿಕೊಳ್ಳುವದಕ್ಕಾಗಿ "ಕಮಲಾಕುಮಾರಿ! ನಾನು ಮಾಡಿದ ಅಪರಾಧವನ್ನು ಕ್ಷಮಿಸು. ನಿನ್ನ ಕೈಕಾಲು ಬೀಳುತ್ತೇನೆ ನಿನ್ನ ಸಾಹಸಕ್ಕೆ ಎಣೆಯೇ ಇಲ್ಲ ನಿನ್ನಂಥ ಕೆಚ್ಚೆದೆಯ ಕುಮಾರಿಯನ್ನು ನಾನೆಲ್ಲಿಯೂ ಕಂಡಿಲ್ಲ. ದಯಮಾಡಿ ನನಗೆ ಜೀವದಾನವನ್ನು ಮಾಡು" ಎಂದು ಅಂಗಲಾಚಿ ಬೇಡಿಕೊಂಡನು.

ಸೈನಿಕರೆಷ್ಟೋ ಜನರು ವಿಲಾಸಕುಮಾರನಿಗೆ ದೇಹಾಂತ ಶಿಕ್ಷೆಯಾಗಲೇಬೇಕೆಂದು ಆಗ್ರಹ ಮಾಡಿದರು ಆದರೆ ಉದಾರಾಂತಃಕರುಣಿಯಾದ ಕೆಚ್ಚೆದೆಯ ಕುಮಾರಿಯು ಅವನಿಗೆ ಜೀವದಾನ ಮಾಡಿಬಿಟ್ಟಳು. ಆ ಬಳಿಕ ವಿಲಾಸಕುಮಾರನು ಒಂದು ಗಳಿಗೆಯೂ ಅಲ್ಲಿ ನಿಲ್ಲದೆ ತನ್ನ ಪಟ್ಟಣಕ್ಕೆ ಪಲಾಯನ ಹೇಳಿದನು.

ಕಮಲಾದೇವಿಯು ಪಟ್ಟಣವು ತನ್ನ ಕೈವಶವಾಗುತ್ತಲೇ ಅರಮನೆಯಲ್ಲಿದ್ದ ಸೆರೆಯ ಪಿಪಾಯಿಯನ್ನು ನೆಲಕ್ಕೆ ಸುರುವಿಸಿದಳು. ಹಳ್ಳಿಹಳ್ಳಿಗೆ ಸೈನಿಕರನ್ನು ಕಳಿಸಿ ಕೊಟ್ಟು ಮದ್ಯದಂಗಡಿಗಳನ್ನು ನೆಲಸಮ ಮಾಡಲಿಕ್ಕೆ ಆಜ್ಞಾಪಿಸಿ ಮುಕುಂದನ ಅವಸ್ಥೆಯು ಏನಾಗಿದೆಯೆಂದು ನೋಡುವದಕ್ಕೆಂದು ಸೆರೆಮನೆಯ ಬಳಿಗೆ ಬಂದಳು

ಮುಕುಂದನು ಕಾರಾಗೃಹದ ತಾಪದಿಂದ ತೀರ ಮರಣೋನ್ಮುಖನಾಗಿ ಬಿದ್ದಿದ್ದನು ಅವನು ಎಪ್ಪತ್ತು ದಿವಸಗಳಿಂದ ಅನ್ನ ನೀರು

ಗಳನ್ನು ತೆಗೆದು ಕೊಂಡಿರಲಿಲ್ಲ. ಅವನ ಮುಖವು ಬಾಡಿ ಹೋದ ಗುಲಾಬಿಯಂತೆ ಆಗಿ ಹೋಗಿದ್ದಿತು. ಅವನಿಗೆ ರಾಜಧಾನಿಯಲ್ಲಿ ನಡೆದ ಸುದ್ದಿಯ ಸುಳಿವೇ ಇರಲಿಲ್ಲ. ಹೊರಗೆ ಬರುತ್ತಿರುವ ಕಮಲಾಕುಮಾರಿಯನ್ನು ಕಂಡನು. ಹಲ್ಲು ಕಡಿಯುತ್ತ

"ಚಾಂಡಾಲಿ! ಕಮಲೆ! ವಿಲಾಸಕುಮಾರನು ನಡೆಸಿದ ಅನ್ಯಾಯಗಳನ್ನು ಕಂಡೂ ಕಾಣದವರಂತೆ ಮೆರೆದಾಡ ಹತ್ತಿರುವಿಯಾ? ನನ್ನ ಮೇಲಿನ ಪ್ರೇಮವು ಎಲ್ಲಿ ಹೋಯಿತು?'' ಎಂದು ತಿರಸ್ಕಾರಪೂರ್ವಕ ಮಾತನಾಡಿ ಮೋರೆ ತಿರುಗಿಸಿಕೊಂಡು ಮಲಗಿದನು.

ಕಮಲಾಕುಮಾರಿಯು ಒಳಗೆ ಬಂದು ನಡೆದ ಸಂಗತಿಯನ್ನೆಲ್ಲ ಸಾದ್ಯಂತವಾಗಿ ತಿಳಿಸಿದಳು. "ಯಾಕೆ? ಪ್ರಾಣಪ್ರಿಯನೆ? ನಾನೇನು ಅಪರಾಧ ಮಾಡಿರುವೆನು. ವಿಲಾಸಕುಮಾರನನ್ನು ಸೋಲಿಸಿ ಸೆರೆ ಸಿಂದಿಗಳನ್ನು ಹೇಳಹೆಸರಿಲ್ಲದಂತೆ ಮಾಡಿ ನನ್ನ ಕರ್ತವ್ಯವನ್ನು ಮಾಡಲಿಲ್ಲವೇ? ಅವನನ್ನು ಚಂಡಾಡದೆ ಜೀವದಾನ ಮಾಡಿದ್ದಕ್ಕಾಗಿ ಕೋಪ ಬಂದಿತೇನು? ಹೇಳು? ಏಕೆ? ಮಾತನಾಡುವದಿಲ್ಲವೇ? ಎಂದು ಕಣ್ಣೀರು ಸುರಿಸಹತ್ತಿದಳು.

ಮುಕುಂದನಿಗೆ ಅವಳ ಬಗ್ಗೆ ತಿಳಿದುಕೊಂಡ ತಪ್ಪು ತಿಳುವಳಿಕೆಯು ದೂರಾಯಿತು. ಹಿಡಿಸಲಾರದಷ್ಟು ಆನಂದವಾಯಿತು.

ಆನಂದದ ಭರದಲ್ಲಿ ಕಣ್ಣುಮುಚ್ಚಿ ಸ್ವಸ್ಥವಾಗಿ ಮಲಗಿಕೊಂಡನು. ಶುಶ್ರೂಷೆಯ ಕೆಲಸವಾದರೂ ಜೋರಿನಿಂದ ನಡೆಯಿತು. ಹದಿನೈದು ಇಪ್ಪತ್ತು ದಿನಗಳಲ್ಲಿಯೇ ಮುಕುಂದನಿಗೆ ವಾಸಿಯಾಯಿತು ಕಮಲಾಕುಮಾರಿಗೆ ಹಿರಿಹಿರಿ ಹಿಗ್ಗು! ಕಮಲೆ ಮುಕುಂದರ ವಿವಾಹವು ವಿಜೃಂಭಣೆಯಿಂದ ನಡೆಯಿತೆಂಬದನ್ನು ಬೇರೆ ಹೇಳಬೇಕೆ?

ಸಂಜೆಯ ಸಮಯ; ನಿತ್ಯದಂತೆ ಕಮಲೆ ಮುಕುಂದರಿಬ್ಬರೂ ವಿಹಾರಕ್ಕಾಗಿ ಉದ್ಯಾನಕ್ಕೆ ಬಂದರು. ತೋಟಿಗನು ಗಿಡಗಳಿಗೆ ನೀರು ಹಣಿಸುವ ಕಾರ್ಯವನ್ನು ಇದೇ ಮುಗಿಸಿ ಹೆಂಡತಿಯೊಡನೆ ಆ ಸುದ್ದಿ, ಈ ಸುದ್ದಿ ಮಾತನಾಡುತ್ತ ಕಾರಂಜಿಯ ಹತ್ತರಿರುವ ಕಟ್ಟೆಯ ಮೇಲೆ ಕುಳಿತುಕೊಂಡಿದ್ದನು.

" ಪ್ರಿಯಾ ! ಇಷ್ಟು ಸುಖದ ಕಾಲವು ಬೇಗನೆ ಬಂದೀತೆಂದು ನನ ಗನಿಸಿರಲಿಲ್ಲ. ಕಮಲಾರಾಣಿಯವರ ಸಾಹಸ ಬಹು ದೊಡ್ಡದು. ಅವರು ಮದ್ಯಪಾನದ ಚಟವನ್ನು ಕಿತ್ತು ಹಾಕದಿದ್ದರೆ ನಾವಿಂದು ಎಷ್ಟೊಂದು ಕಷ್ಟಕ್ಕೊಳಗಾಗುತ್ತಿದ್ದೆವೋ ಏನೋ ? ನಮ್ಮಿಬ್ಬರ ಮಾತಿಷ್ಟೇ ಏಕೆ ? ನೋಡಿದೆಯಾ ? ಮಹೀಪಟ್ಟಣವೆಲ್ಲ ಎಷ್ಟು ಸುಖ ಮಯವಾಗಿ ಹೋಗಿದೆ? ಕಮಲಾರಾಣಿಯವರಿಗೆ ದೇವರು ಚಿರಕಾಲ ಬಾಳುವಂತೆ ಮಾಡಲಿ!" ಎಂದು ತೋಟಿಗನ ಹೆಂಡತಿಯು ನುಡಿದಳು.

"ಅಹುದು! ನೀನೆನ್ನುವದು ಸತ್ಯ ! ಮುಕುಂದರಾಯರು ವಿಲಾ ಸಕುಮಾರನಿರುವಾಗ್ಗೆ ನನಗೆಷ್ಟೋ ಸಲ ಆ ಚಟವನ್ನು ಬಿಡಲು ಬೇಡಿಕೊಂಡಿದ್ದರು. ಆದರೆ ನಾನು ಅವರ ಮಾತಿಗೆ ಲಕ್ಷಗೊಡುತ್ತಿರ ಲಿಲ್ಲ ಹೀಗಾಗಿ ನನ್ನ ಹಾನಿಯನ್ನು ಬಹಳ ಮಾಡಿಕೊಂಡೆ. ನನ್ನಂಥ ಎಷ್ಟೋ ಜನರು ಆ ಕಾಲಕ್ಕೆ ಅವರ ಮಾತನ್ನು ಕೇಳದ್ದರಿಂದಲೇ ಗುಲಾಮಗಿರಿಯಲ್ಲಿ ಕೊಳೆತೆವು. ಪರರಾಜನಾದ ವಿಲಾಸನ ದಾಸಾ ನುದಾಸರಾಗಿ ದುಡಿದೆವು. ನಮ್ಮಂಥ ಪಾಮರರ ಉದ್ಧಾರದ ಸಲು ವಾಗಿ ಮುಕುಂದರಾಯರೂ ಕಮಲಾದೇವಿಯವರೂ ತಮ್ಮ ಜೀವದ ಹಂಗುದೊರೆದು ಕಾದಾಡಿ ಸ್ವಾತಂತ್ರ್ಯ ಸಂಪಾದನೆಮಾಡಿದರು. ನಮಗೆ ಸುಖವನ್ನುಂಟು ಮಾಡಿದರು. ಪರಮೇಶ್ವರನು ಅವರನ್ನು ಚಿರಂಜೀ ವಿಗಳನ್ನಾಗಿ ಮಾಡಲಿ ! " ಎಂದು ತೋಟಿಗನು ಗಂಭೀರಯುಕ್ತ ವಾಣಿಯಿಂದ ನುಡಿದನು.

ಇಬ್ಬರಿಗೂ ಕಮಲೆ ಮುಕುಂದರು ಬಂದದ್ದರ ಅರಿವೇ ಇರಲಿಲ್ಲ. ತಮ್ಮ ಸುಖವಿಲಾಸಗಳಲ್ಲಿಯೇ ಮೈಮರೆತು ಕುಳಿತುಬಿಟ್ಟರು. ಕಮಲೆ ಮುಕುಂದರು ಮಲ್ಲಿಗೆಯ ಮಂಟಪದ ಹತ್ತರದಲ್ಲಿಯೇ ನಿಂತುಕೊಂಡು ಅವರ ನಡುವೆ ಆದ ಎಲ್ಲ ಮಾತು ಕತೆಗಳನ್ನೂ ಕೇಳಿಕೊಂಡರು. ತುಸು ಹೊತ್ತಾದ ಬಳಿಕ ತೋಟಿಗನ ಹೆಂಡತಿಯು ಮುಕುಂದ ಕಮ ಲೆಯರು ನಿಂತದ್ದನ್ನು ಕಂಡಳು. ತೋಟಿಗನೂ ಅವನ ಹೆಂಡತಿಯೂ ಅಲ್ಲಿಂದ ಹೊರಟುಹೋದರು.

ಕಮಲೆ ಮುಕುಂದರಿಬ್ಬರೂ ತೋಟದಲ್ಲಿ ಅತ್ತಿತ್ತ ಅಡ್ಡಾಡಿ ಬಕುಲವೃಕ್ಷದ ಕೆಳಗೆ ಹಾಸುಗಲ್ಲಮೇಲೆ ಬಂದು ಕುಳಿತರು.

"ಕಮಲೇ ನೀನೇ ಧನ್ಯಳು! ನೀನೇ ಮಾನ್ಯಳು! ನಿನ್ನ ಪರಾಕ್ರಮವು ದೊಡ್ಡದು! ನಿನ್ನ ಸಾಹಸ ಕೃತ್ಯಗಳನ್ನು ಕೇಳಿ ನನಗೆ ಇಂದು ಮಿಗಿಲಾದ ಆನಂದವಾಗಿದೆ' ಎಂದು ನುಡಿದು ಮುಕುಂದನು ಆವಳನ್ನು ಅಪ್ಪಿಕೊಂಡನು.

"ನಾಥ! ನಾನೆಷ್ಟರವಳು?" ಇದು ನನ್ನ ಸಾಹಸವಲ್ಲ! ನೀವೇ ಅಲ್ಲವೇ ಮದ್ಯಪಾನ ಚಟವನ್ನು ನಿರ್ಮೂಲ ಮಾಡಿ, ಬಡವರ ಪ್ರೇಮಕ್ಕೆ ಪಾತ್ರರಾದವರು! ನಿಮ್ಮ ಪುಣ್ಯದಿಂದಲೇ ಅಲ್ಲವೇ ಮಹೀ ಪಟ್ಟಣವು ಐಸಿರಿತನಕ್ಕೆ ಏರಹತ್ತಿದ್ದು! ನಿಜವಾಗಿ ನಿವೇ ಧನ್ಯರು! ದರಿದ್ರನಾರಾಯಣರ ಸೇವೆಮಾಡಿದ ಪುಣ್ಯವು ನಿಮ್ಮ ಪಾಲಿಗೇ ಇರುವದು! ಕಾಳಗದಲ್ಲಿ ನನಗೆ ಹೋರಾಡಲಿಕ್ಕೆ ಸಾಮರ್ಥ್ಯ ಬಂದುದಾದರೂ ದೇವತಾ ಸಮಾನರಾದ ನಿಮ್ಮ ತಪಃಪ್ರಭಾವದ ಪುಣ್ಯದಿಂದಲೇ ಅಲ್ಲವೇ? ಎಂದು ಕಮಲಾಕುಮಾರಿಯು ಮುಕುಂದನನ್ನು ಕುರಿತು ನುಡಿದಳು.

"ಪ್ರಿಯೇ! ಯಾಕೆ ಇಷ್ಟು ವಾದವಿವಾದ? ನಮ್ಮಿಬ್ಬರಿಗೆ ಈ ಸಾಮರ್ಥ್ಯವನ್ನು ತಂದುಕೊಟ್ಟವನು ಜಗದಂತರ್ಯಾಮಿಯಾದ ಸಾಕ್ಷಾತ್ ಪರಮೇಶ್ವರನು. ಅವನೇ ನಿಜವಾಗಿ ದೊಡ್ಡವನು. ಎಲ್ಲ ಕೀರ್ತಿಯೂ ಅವನಿಗೇ ಇರಲಿ! ಪರಮೇಶ್ವರನು ನಮ್ಮಿಬ್ಬರಿಗೂ ಇದೇ ರೀತಿಯಿಂದ ಚಿರಕಾಲದವರೆಗೂ ಬಡವರ ಸೇವೆ ಮಾಡುವ ಭಾಗ್ಯವನ್ನು ಕೊಡಲಿ!" ಎಂದು ಜಗದೀಶ್ವರನನ್ನು ಪ್ರಾರ್ಥಿಸಿದನು.

ಕಮಲೆ ಮುಕುಂದರೀರ್ವರೂ ಆನಂದದ ಭರದಲ್ಲಿ ಎಷ್ಟೊತ್ತು ಅಲ್ಲಿ ಭಾವನಾಪರವಶರಾಗಿ ಕುಳಿತಿದ್ದರೋ ಅದು ಅವರಿಗೇ ತಿಳಿಯಲಿಲ್ಲ.

—ಃಮುಗಿದುದುಃ—

# ಬಡವರ ರೊಟ್ಟಿ!

(ಸಂಜೆ ೪ ಗಂಟೆ ಸ್ಥಳ—ಅರಿವೆಯ ಗಿರಣಿಯ ಪಕ್ಕದಲ್ಲಿಯ ಬಂಗ್ಲೆಯ ಮುಂಭಾಗದ ಚೌಕು ನಾಲ್ಕಾರು ಕುರ್ಚಿಗಳೂ ಒಂದೆರಡು ಮೇಜುಗಳೂ ಇಡಲ್ಪಟ್ಟಿವೆ. ಕಮಲಾ ಬಾಯಿಯು ಪುಸ್ತಕ ಓದುವದರಲ್ಲಿ ತಲ್ಲೀನಳಾಗಿ ಕುರ್ಚಿಯಮೇಲೆ ಕುಳಿತಿದ್ದಾಳೆ ಒಂದು ಮೂಲೆಯಲ್ಲಿ ಲಾಂದರಗಳನ್ನು ಒರೆಸುತ್ತ ಬೀರಮ್ಮ ಕುಳಿತಿದ್ದಾಳೆ)

ಬೀರಮ್ಮ:—(ಸ್ವಗತ) ಅಮ್ಮನವರು ಏನೋ ಓದುವದರಲ್ಲಿ ಮಗ್ನರಾಗಿದ್ದಾರೆ. ಈಗ ಮಾತನಾಡಿಸಿದರೆ ಕೋಪಿಸಿಕೊಳ್ಳಲಿಕ್ಕಿಲ್ಲವಷ್ಟೆ? ಅಡಿಸುವದೂ ಕಷ್ಟ. ಅಡಿಸದೆ ಇರುವದೂ ಕಷ್ಟ. ಕೇಳಿ ಬಿಡುತ್ತೇನೆ ಆದದ್ದಾಗಲಿ. ಏನೋ ಹರಕು ಚದ್ದರ ರಗ್ಗುಗಳನ್ನಾದರೂ ಕೊಟ್ಟರೆ ಮಕ್ಕಳ ನಡುಕು ತಪ್ಪೀತು: ಅವ್ವಾ 'ಚಳಿ, ಚಳಿ, ಸೀರೆಯ ಸೆರಗನ್ನು ಹೊಚ್ಚೇ-ಹರಕು ಚಾಪೆಯನ್ನಾದರೂ ಹೊಚ್ಚೇ' ಎಂಬ ಮಕ್ಕಳ ಕೂಗಾದರೂ ಅಡಗೀತು. ಇದೆಲ್ಲ ಸರಿ. ನನ್ನ ಬೇಡಿಕೆಯನ್ನು ಪೂರೈಸಿದಾಗಲ್ಲವೇ? (ದುಃಖಿಸುತ್ತ) ನಾವು ಏನು ಪಾಪ ಮಾಡಿದ್ದೇವಾದೀತು? ಬೆಳಗಿನಿಂದಲೂ ಸಂಜೆಯ ವರೆಗೆ ಬೆವರು ಹರಿಯುವಂತೆ ಒಂದೇಸವನೆ ನಾನೂ ನನ್ನ ಗಂಡನೂ ದುಡಿಯುವದಲ್ಲದೇ ನಾವು ಇವರ ಮನೆಯ ಸಣ್ಣ ಪುಟ್ಟ ಕೆಲಸಗಳನ್ನಾದರೂ ಮಾಡುತ್ತೇವೆ. ಆದರೂ ದೈನ್ಯಾವಸ್ಥೆಯು ನಮಗೆ ತಪ್ಪಿಲ್ಲ. ಇಂದಿನ ಕೂಲಿಯು ಇಂದಿನ ಗಂಜೀ ತಿಳಿಯ ಮಟ್ಟಿಗೇ ಆಗಿ ಹೋಗಿ ನಾಳಿನ ಚಿಂತೆ ಮುಂದೆ ಬಂದು ಸಿದ್ಧವಾಗುತ್ತದೆ. ಮಕ್ಕಳ ಶಿಕ್ಷಣದ ಮಾತಂತೂ ಒತ್ತಟ್ಟಿಗುಳಿಯಲಿ. ಅವರಿಗೆ ಮಲಗಲು ಹಾಸಿಗೆ ಇಲ್ಲ ಹೊದಿಯಲು ಹೊದಿಕೆ ಇಲ್ಲ. ಉಡಲು ವಸ್ತ್ರವಿಲ್ಲ. ಮಾಸಿದ ಕೂದಲನ್ನು ಬಾಚಿ ಕಟ್ಟಬೇಕೆಂದರೆ ತೊಟ್ಟು ಎಣ್ಣೆ ತಂದು ಕೊಡುವ ಸಾಮರ್ಥ್ಯವೂ ಕೂಡ ನಮ್ಮಲ್ಲಿ ಇಲ್ಲ. ದೇವಾ! ಬೆಳಗಿನಿಂದಲೂ ಸಾಯಂಕಾಲದವರೆಗೆ ಎಡೆಬಿಡದೆ ದುಡಿಯುತ್ತಿರುವದಕ್ಕಾಗಿ ನಮಗಿಷ್ಟು ಪ್ರಾಯಶ್ಚಿತ್ತವೇ? ಆದರೆ—ನಮ್ಮ ಯಜಮಾನತಿಯಾದ ಕಮಲಮ್ಮ

ನಂಥವರು ದಿನದಲ್ಲಿ ಅರ್ಧಗಳಿಗೆ ಕೂಡ ಶ್ರಮ ಪಡುವದಿಲ್ಲ. ಇಂಥವರಿಗೆ ಬೇಕಾದಷ್ಟು ಉಡಿಗೆ ತೊಡಿಗೆ, ಬೇಸರಿಕೆಯಾಗುವಷ್ಟು ತಿಂಡಿ ತಿನಸು. ಊಟಕ್ಕೊಂದು ಮನೆ, ಆಟಕ್ಕೊಂದು ಮನೆ ನೋಟಕ್ಕೊಂದು ಮನೆ. ಏನೊಂದರ ಕೊರತೆಯೂ ಇಲ್ಲ. ಕುದುರೆಗಾಡಿಯು ಬೇಕೆಂದರೆ ಕುದುರೆ ಗಾಡಿ, ಮೋಟರು ಬೇಕೆಂದರೆ ಮೋಟರು. (ಇವಳು ಈ ರೀತಿ ವಿಚಾರದಲ್ಲಿ ತೊಡಗಿರಲು ಕಮಲಮ್ಮನ ಲಕ್ಷವು ಇತ್ತ ಕಡೆಗೆ ಬೀಳುವದು. ಅವಳು ಓದುವದನ್ನು ನಿಲ್ಲಿಸುವಳು.)

ಕಮಲಮ್ಮ:—ಏಕೆ ಬೀರಮ್ಮಾ ಅದೇನೋ ಗಹನ ಯೋಚನೆಯಲ್ಲಿ ಲೀನವಾದಂತೆ ತೋರುತ್ತೀ ಅಂತಹದೇನಮ್ಮಾ ಯೋಚನೆ ?

ಬೀರಮ್ಮ:— ಕೂಲಿಕಾರರಿಗೂ, ರೈತರಿಗೂ ಯೋಚನೆಯಿಲ್ಲದ ದಿನಗಳಿಲ್ಲವಮ್ಮ. ಬೇರೆ ಯೋಚನೆಯೇನು ನಮಗೆ ಹೊಟ್ಟೆ ಬಟ್ಟೆಗಳ ಯೋಚನೆಯೇ ಯೋಚನೆ ಸುಖಸಾಗರದಲ್ಲಿದ್ದ ನಿಮಗೆ ನಮ್ಮಂಥ ಬಡಪಾಯಿಗಳ ಗೋಳು ಹೇಗೆ ಗೊತ್ತಾದೀತು ?

ಕಮಲಮ್ಮ:—ಹೌದು ಬೀರಮ್ಮಾ ! ಸುಖವಸ್ತುಗಳಿಗೆ ಬಡವರ ಗೋಳಿನ ಬಾಳು ಲಕ್ಷಕ್ಕೆ ಹೇಗೆ ಬರುವನು ಬಂದರೂ ಅದರ ಕಡೆಗೆ ಗಮನಕೊಡುವದಿಲ್ಲ. ಇಕೋ ನೋಡು ನಾನು ಓದುತ್ತಿರುವದೂ ಅದೇ ವಿಷಯ. (ಪುಸ್ತಕ ತೋರಿಸಿ) ಇದಕ್ಕೆ 'ಸಾಮ್ಯವಾದ' ಪುಸ್ತಕಾ ಎನ್ನುತ್ತಾರೆ. ಇದರಲ್ಲಿ ನಮ್ಮಂಥ ಬಡವರ ಕಷ್ಟನಷ್ಟಾ ಎಲ್ಲಾ ವರ್ಣಿಸಿದ್ದಾರೆ.

ಬೀರಮ್ಮ:—ಇರಬಹುದು ತಾಯಿ ಅದೆಲ್ಲ ಪುಸ್ತಕಾ ಗಿಸ್ತಕಾ ವಿಚಾರ ನಮಗೇನು ತಿಳಿಯಬೇಕು? ಅಮ್ಮಾ. ನಿಮಗೊಂದು ವಸ್ತು ಕೇಳಬೇಕೆಂದು ಮಾಡಿದ್ದೆನೆ ಕೇಳಲೇ?

ಕಮಲಾ:—ಕೇಳು ಅದರಲ್ಲೇತರ ಸಂಕೋಚ?

ಬೀರಮ್ಮ:—ಅಮ್ಮಾ, ಮಕ್ಕಳಿಗೆ ಥಂಡಿ. ಚಳೀ ಚಳೀ ಅಂತಾ ನಡಗತಾವೆ. ಬರೀ ನನ್ನ ಸೀರೇ ಸೆರಗಿನಿಂದ ನಡಕು ಹೋಗೋದಿಲ್ಲಾ ಅಂತಾರೆ. ನಿಮ್ಮಲ್ಲಿಯ ಹರಕು ಚದ್ದರಾ ರಗ್ಗಾ ಏನಾದರೂ ಇದ್ದರೆ ಕೊಡಮ್ಮ.

ಕಮಲಮ್ಮ:— ಒಳ್ಳೇ ಕಠಿಣಪ್ರಸಂಗ ಬಂದಿತೀಗ. ನಾನೇನೋ ಒಂದೆರಡಾಣೆ ಬೇಡಬಹುದೂ ಅಂತಾ ತಿಳಿದಿದ್ದೆ. ಭಾವನವರ ಹರಕು ಶಾಲನ್ನೂ ರಗ್ಗನ್ನೂ ಕೊಡಬಹುದಾಗಿತ್ತು. ಆದರೆ— ಪರೋಪ ಕಾರ ಬುದ್ಧಿಯೊಂದು ಬೇಕಲ್ಲ ನಮಗೆ. ಅವುಗಳನ್ನು ನಿನ್ನೆಯೇ ಪಾತ್ರೆ ಮಾರುವವನಿಗೆ ಕೊಟ್ಟು ಹಿತ್ತಾಳಿಯ ಡಬ್ಬಿಯನ್ನು ತೆಗೆದುಕೊಂಡೆ. ಇಂಥ ಚುರುಕುತನ ನಮ್ಮ ಶ್ರೀಮಂತರಲ್ಲಿ ಬಹಳ! ಸರಿ- ಆದರೆ ಈಗೇನು ಮಾಡಲಿ? ನಕಾರ ಉತ್ತರದ ಹೊರತು ಗತ್ಯಂತರವಿಲ್ಲ. ( ಸ್ವಲ್ಪ ಯೋಚಿಸಿ ) – ಬೀರವ್ವಾ, ಏನು ಮಾಡುವದು? ಸದ್ಯ ಕ್ಕಂತೂ ಹರಕು ಬಟ್ಟೆಗಳೊಂದೂಯಿಲ್ಲ. ಮುಂದೆ ಇನ್ನೊಂದಾದರೂ ನೋಡಲಿಕ್ಕೆ ಬಂದೀತು?

ಬೀರಮ್ಮ:— ( ಸ್ವಗತ ) ಮುಂದೆ ನೋಡಲಿಕ್ಕೆ ಬಂದೀತಂತೆ- ಮುಂದೆ ನೋಡುವದೇನು ನಮ್ಮ.... ಗೋರಿ........ಯನ್ನು ನೋಡಿ ದರೆ ನೋಡಬೇಕು ಬಡತನದ ಬಾಧೆಯಿಂದ ನಮ್ಮ ಕೂಲಿಕಾರ ವರ್ಗದವರು ಇಂದಿದ್ದವರು ನಾಳೆ ಇರುವದಿಲ್ಲ. ಕೆಲವರು ಔಷಧ ಗಳಿಲ್ಲದೆ ಬೇನೆಯಿಂದ ಸಾಯುವರು. ಕೆಲವರು ಹೊಟ್ಟೆಗಿಲ್ಲದೆ ಉಪ ವಾಸ ಪ್ರಾಣ ಬಿಡುವರು. ಇನ್ನು ಕೆಲವರು ಬಟ್ಟೆಬರೆಗಳಿಲ್ಲದ ಮೂಲಕ ಚಳಿ ಮಳೆಗಳ ತಾಪವನ್ನು ಸಹಿಸಲಾರದೆ ಮರಣ ಹೊಂದು ವರು. ಎಂಥ ಕೆಟ್ಟ ಕಾಲವಿದು ನಮಗೆ ( ಪ್ರಕಾಶ ) ತಾಯೀ. ಇಂದೇ ಕೊಟ್ಟರೆ ತಮಗೆ ಪುಣ್ಯ ಬರುವದವ್ವ. ನನ್ನ ಮಕ್ಕಳಿಗೆ ಜೀವದಾನ ಮಾಡಿದಂತಾಗುತ್ತದೆ. ಮಕ್ಕಳು ಬಹಳ ಬಳಲುತ್ತಾ ಇವೆ. 'ಅಮ್ಮನವರಿಗೆ ಕೇಳಿಕೊಂಡು ಇಂದೇನಾದರೂ ಹೊದಿಯ ಲಿಕ್ಕೆ ತಂದು ಕೊಡ್ತೇನೆ ಮಕ್ಕಳಿರಾ' ಎಂದು ಬರುವಾಗ್ಗೆ ಹೇಳಿ ಬಂದಿದ್ದೆ. ಅವು ನನ್ನ ದಾರೀ ಕಾಯ್ದುಕೊಂಡು ಕುಳಿತಿದ್ದಾವು. ಅವು ಗಳನ್ನು ನಿರಾಶೆ ಮಾಡಬೇಡ ನನ್ನ ತಾಯೀ. ಒಂದಾದರೂ ಬಟ್ಟೀ ಕೊಡಿ. ಹಾಗೇ ನಾನು ಮಕ್ಕಳಿಗೆ ಮೋರೆ ತೋರಿಸಲಾರೆ.

ಕಮಲ:— ಇದ್ದರೆ ನಾನೇನು ಕೊಡುತ್ತಿದ್ದಿಲ್ಲೇನು? ಇಲ್ಲಾ ಅಂದರೆ ಒಂದು ಮಾತು ತಿಳಿದುಕೊಂಡು ಸುಮ್ಮನಿರಬೇಕು. ನನ್ನ ವೆಲ್ಲಾ ಬಟ್ಟೀ ಕೊಟ್ಟುಬಿಟ್ಟು ನಾ ಚಳಿಯಲ್ಲಿ ನಡುಗಬೇಕೆನ್ನುವಿಯಾ

ಬೀರಮ್ಮ:— ಬೇಡಾ ತಾಯಿ, ನೀವು ನಡುಗಿದರೇನು ನಾವು ನಡುಗಿದರೇನು ಎಲ್ಲಾ ಒಂದೇ. ನೀವು ಎಷ್ಟಂದರೂ ಗಿರಣಿಯ ಒಡೆಯರು ಏನೋ ಇದ್ದುದರಲ್ಲಿಯೇ ಒಂದು ಕೊಟ್ಟರೆ ನಾವೂ ನಾಲ್ಕು ದಿವಸ ಬಾಳಬಹುದು. ಕೊನೆಗೆ ಎರಡು ರೂಪಾಯಿಗಳನ್ನಾದರೂ ಕೊಡಿ ಕೌದಿಯನ್ನಾದರೂ ಕೊಂಡುಕೊಳ್ಳುತ್ತೇನೆ

ಕಮಲ:— ( ಸ್ವಗತ ) ಎರಡು ರೂಪಾಯಿ ಹೇಗೆ ಕೈಯಿಂದ ಉಚ್ಚಬೇಕು ಒಂದೆರಡಾಣೆಗಳಾಗಿದ್ದರೆ ಹೇಗೋ ಕೊಡಬಹುದಾಗಿತ್ತು ಸ್ಟೋರಿನೊಳಗಿಂದ ಹೊಸದೊಂದು ಬಟ್ಟೆ ತೆಗೆದುಕೊಡಲಿಕ್ಕೂ ಮನಸ್ಸು ಬರೋದಿಲ್ಲ. ಆದರೆ ಇವಳ ಆರ್ತನಾದವನ್ನು ಕೇಳಿ ಸುಮ್ಮನಿರುವದಾದರೂ ಹೇಗೆ? ( ಪ್ರಕಾಶ ) ಒಳ್ಳೇದು. ನಾಳೆ ಬಾರಮ್ಮ. ಸ್ಟೋರಿನೊಳಗಿನದೊಂದು ತೆಗೆಸಿ ಕೊಡೋಣಂತ,

ಬೀರಮ್ಮ:— ಆಯಿತು ಹಾಗೇ ಮಾಡಿರಮ್ಮ ನಿಮ್ಮ ಇಷ್ಟ. ದೇವ್ರೇ ನಾಳಿನವರೆಗೆ ನನ್ನ ಬೇನೆಯ ಮಕ್ಕಳನ್ನು ಕಾಪಾಡಯ್ಯ!

( ಗೋಕುಲದಾಸನು ತನ್ನ 'ಟಾಮ್ಯಾ' ನಾಯಿಯೊಡನೆ ಪ್ರವೇಶಿಸುವನು. )

ಗೋಕುಲ:—ಕಮಲಾ, ಇಪ್ಪತ್ತೈದು ರೂಪಾಯಿ ತಾ. ಟಾಮ್ಯಾನ ಬಿಸ್ಕೀಟ ಬಾಬ್ತು ಕೊಡಬೇಕಾಗಿದೆ.

( ಬೀರಮ್ಮ ಹೊರಡುವಳು )

ಗೋಕುಲ:— ನಿಲ್ಲು ಬೀರಮ್ಮಾ ಹೊರಗೆ ಬಿಸ್ಕೀಟ ಕಂಪನಿಯವ ನಿಂತಿದ್ದಾನೆ. ಅವನಿಗೆ ಹಣಕೊಟ್ಟು ಪಾವ್ತೀ ತೆಗೆದುಕೊಂಡು ಬಾ

( ತನ್ನ ಸೊಂಟಕ್ಕೆ ಜೋತಾಡುತ್ತಿದ್ದ ಚೀಲದಿಂದ ಕಮಲೆ ಹಣ ತೆಗೆದುಕೊಡುವಳು. ಬೀರಮ್ಮ ತೆಗೆದುಕೊಂಡು ಹೋಗುವಳು )

ಕಮಲಮ್ಮ:-(ಸ್ವಗತ) ಈ ನಾಯಿಯ ಸಲುವಾಗಿ ಏನಿಲ್ಲೆಂದರೂ ತಿಂಗಳಿಗೆ ಹತ್ತಿಪ್ಪತ್ತು ರೂಪಾಯಿ ವೆಚ್ಚ ಮಾಡುತ್ತೇವೆ. ಆದರೆ— ಬೆಳಗಿನಿಂದಲೂ ಸಂಜೆಯವರೆಗೆ ಸತತೋದ್ಯೋಗ ಮಾಡುವ ಕೂಲಿಕಾರರ ಸಲುವಾಗಿ ಏಳು ರೂಪಾಯಿ. ಬಹಳವಾದರೆ ಎಂಟು. ಒಂಬತ್ತು.

ಯಾವ ಕೂಲಿಕಾರರ ಪರಿಶ್ರಮದ ಮೂಲಕ ನಾವು ಲಕ್ಷಾಧೀಶರಾಗಿ ಮೆರೆಯುವೆವೋ ಅಂಥ ಕೂಲಿಕಾರರ ಅವಸ್ಥೆಯು ಎಷ್ಟು ಕರುಣಾಜನ್ಯ ವಾಗಿದೆ ಯಾವ ಕೂಲಿಕಾರರು ನಿತ್ಯವೂ ನಮ್ಮ ಗಿರಣಿಯಲ್ಲಿ ಹೊಸ ಹೊಸ ಬಗೆಯ ಬಟ್ಟೆಗಳನ್ನು ಸಿದ್ಧಪಡಿಸುತ್ತಿದ್ದಾರೋ ಅಂಥವರಿಗೆ ಧರಿಸಲು ಹರಕು ಬಟ್ಟೆಗೆ ಕೂಡ ಗತಿಯಿಲ್ಲ. ಇಂಥ ಶ್ರಮಜೀವಿ ಯೊಬ್ಬಳು ಬಾಯ್ತೆರೆದು ಬೇಡಿದರೆ ಕೂಡಲೆ ಒಂದು ಹೊದಿಯುವ ಬಟ್ಟೆ ಕೊಡಲಿಕ್ಕೆ ಮನಸ್ಸು ಬರಲಿಲ್ಲವಲ್ಲವೇ ? ಅಯ್ಯೋ ನಾನೆಂಥ ಅಧಮಳು ?

ಬೀರಮ್ಮ:—ಇದು ಕೊಳ್ಳಿ ಪಾವ್ತೀಚೀಟಿ. ಅಮ್ಮಾ, ಹೊರಗೆ ಹೂಗಾರವನು ಬಂದಿದ್ದಾನೆ. ಅವನಿಗೇನೋ ಹತ್ತು ರೂಪಾಯಿ ಕೊಡ ಬೇಕಂತಾ ಕೇಳ್ತಾಯಿದ್ದಾನೆ.

ಕಮಲಮ್ಮ.—ಬರಲಿ ತಡೆಯೆಂದು ಹೇಳು ಆತನಿಗೆ (ಯೋಚಿಸಿ) ಇದೋ ಈ ಬೀರಮ್ಮನಿಗೆ ಮಾಸಿದ ತಲೆ ಬಾಚಿ ಕಟ್ಟಬೇಕಂದರೆ ಒಂದು ಹನಿ ಕೊಬ್ರೀಯಣ್ಣೆ ಕೂಡ ಸಿಗುವದಿಲ್ಲ. ನಾನು ಮಾತ್ರ ಈ ಕೂದಲ ಶೃಂಗಾರಕ್ಕಾಗಿ ತಿಂಗಳಿಗೆ ಕಡಿಮೆ ಕಡಿಮೆ ಹದಿನೈದು ರೂಪಾಯಿ ವೆಚ್ಚ ಮಾಡುತ್ತೇನೆ. ಇವೇ ಹದಿನೈದು ರೂಪಾಯಿಗಳನ್ನು ಕೊಟ್ಟರೆ ಬೀರಮ್ಮನಂಥ ಒಂದೆರಡು ಬಡ ಸಂಸಾರಗಳು ತಿಂಗಳೊಪ್ಪತ್ತು ತಿಂದುಂಡು ಬಾಳಬಹುದಲ್ಲವೇ ? ( ಚೀಲದಿಂದ ರೂಪಾಯಿ ತೆಗೆದು) ಬೀರಮ್ಮಾ, ಹೂಗಾರವನಿಗೆ ರೂಪಾಯಿ ಕೊಟ್ಟು ಬಾ (ಮತ್ತೆ ಚಿಂತಾತುರಳಾಗಿ ಮುಗ್ಧಳಂತೆ ಕುಳಿತುಕೊಳ್ಳುವಳು)

ಗೋಕುಲ:—ಪ್ರಿಯೆ ನಾನಿಷ್ಟು ಹೊತ್ತು ಕುಳಿತರೂ ನನ್ನ ಕಡೆಗೆ ಕೊಂಚವೂ ಲಕ್ಷವಿಲ್ಲವಲ್ಲ. ಏನೋ ಯೋಚನೆಯಲ್ಲಿದ್ದಂತೆ ಕಾಣುತ್ತೀ

ಕಮಲಾಃ—ನಾಥಾ, ಬೀರಮ್ಮನಿಗೆ ಒಂದೆರಡು ಹೊದಿಯುವ ವಸ್ತ್ರಗಳು ಬೇಕಂತೆ.

ಗೋಕುಲಃ—ಎಷ್ಟು ಹಣ ತಂದಿದ್ದಾಳೆ?

ಕಮಲಾ:—ಪಾಪ ! ಅವಳೆಲ್ಲಿಂದ ತರಬೇಕು ಹಣ ?

ಗೋಕುಲ:— ಒಳ್ಳೇದು ಅವಳ ಸಂಬಳದಲ್ಲಿ ಮುರಕೊಳ್ಳೋಣ. ಮೆನೇಜರಿಗೆ ಹೇಳಿ ತೆಗೆಸಿಕೊಡು.

ಕಮಲಾ.—ಅಯ್ಯೋ ಅದೆಂಥ ಸಂಬಳವು ಅವಳ ಸಂಬಳದಲ್ಲಿ ಮುರಕೊಳ್ಳುವದೆಂದರೆ ಅವಳ ಗೋಣು ಮುರಕೊಂಡಂತೆಯೇ ಆಗುವದಿಲ್ಲವೇ? ಬಟ್ಟೆಗಳ ಸಲುವಾಗಿ ಸಂಬಳ ವೆಚ್ಚಮಾಡಿ ಬಿಟ್ಟರೆ ಊಟಕ್ಕೆ ಉಪಾಯವೇನು? ಪಾಪ ಅವಳಿಷ್ಟು ಬಾಯಿತೆರೆದು ಬೇಡುವದು ಹೆಚ್ಚೋ ನಾವು ಕೊಡುವದು ಹೆಚ್ಚೋ ನೀವೇ ವಿಚಾರಿಸಿರಿ.

ಗೋಕುಲ:—ಒಳ್ಳೇದು ನಿನ್ನ ಇಷ್ಟವಿದ್ದಂತೆ ಮಾಡು. ನಾನೇಕೆ ಅಡ್ಡಬರಲಿ ? ( ಜೇಬಿನೊಳಗಿಂದ ಬಿಲ್ಲಿನ ಪಟ್ಟಿ ತೆಗೆದು ) ಇಕೋ ಈ ಎಲ್ಲ ಜನರ ಬಿಲ್ಲನ್ನು ಇಂದು ತೀರಿಸಿಬಿಡು. ನಾನು ಮಾರ್ಕೇಟ ಕಡೆಗೆ ಹೋಗಿ ಬರುತ್ತೇನೆ. ( ಸಿಳ್ಳುಹಾಕಿ ) ಟಾಮ್ಯಾ ಟಾಮ್ಯಾ-ಕಮಾನ್........ (ಹೊರಡುವನು)

ಕಮಲಮ್ಮ:—( ಬಿಲ್ಲನ್ನು ಓದುತ್ತ ) ಚಹಾ ಸಕ್ಕರೆ ಬಾಬ್ತು ಇಪ್ಪತ್ತೈದು ರೂಪಾಯಿ. ಸಿಗಾರೇಟ್ ೨೦ ರೂಪಾಯಿ, ಮೋಟರ ರಿಪೇರಿ ನೂರು ರೂಪಾಯಿ ಪೆಟ್ರೋಲ್ ಚಾರ್ಜ ಐವತ್ತು ರೂಪಾಯಿ ( ಬಿಲ್ಲನ್ನು ಬೀಸಾಡಿ ) ಈ ಬಿಲ್ಲನ್ನು ಓದಲು ಸಹ ನನಗೀಗ ಮನಸ್ಸಾಗಲೊಲ್ಲದು. ಎಷ್ಟು ದುಂದುಗಾರಿಕೆಯದು ನಮ್ಮದು ? ಇದಕ್ಕೆ ಮಾಡಲೇನು? [ ಯೋಚಿಸಿ ] ಒಳ್ಳೇದು ಇದಕ್ಕೆ ಚೆನ್ನಾಗಿ ಮದ್ದು ಮಾಡುತ್ತೇನಿನ್ನು. ತಿಜೋರಿಯ ಬೀಗದ ಕೈಗಳೆಲ್ಲ ನನ್ನ ಬಳಿಯಲ್ಲಿರಲು ಅಂಜುವದೇಕೆ? ದುಂದುಗಾರಿಕೆಗಳನ್ನೆಲ್ಲ ಸಂಪೂರ್ಣ ತೆಗೆದು ಹಾಕಿ ಉಪವಾಸ ವನವಾಸ ಯಾತನೆಯಿಂದ ಬಳಲುವ ಕೂಲಿಕಾರರಿಗೂ ರೈತರಿಗೂ ಸಹಾಯ ಮಾಡುತ್ತೇನೆ.

ಬೀರಮ್ಮ—(ಮಾಲೆ ತೆಗೆದುಕೊಂಡು ಬರುವಳು) ತಾಯಿಾ, ಹೂಗಾರವನು ಇದನ್ನು ಕೊಡಹೇಳಿದ. ಈಗ ತಾನೆ ತಾಜಾ ಮೊಗ್ಗೆಗಳಿಂದ ಕಟ್ಟಿರುವನಂತೆ.

ಕಮಲ:—[ಸಿಟ್ಟಿನಿಂದ ಬೀಸಾಡಿ] ಹಾಳಾಗ್ಲಿ ಆ ಮಾಲೆ ಇಗೋ ಈ ಹತ್ತು ರೂಪಾಯಿ ತೆಗೆದುಕೊಂಡು ಮನೇ ವೆಚ್ಚ ಸಾಗಿಸು ನನ್ನ

ಜೊತೆಗೆ ನಡೆ ಎರಡು ರಗ್ಗು ಕೊಡಿಸುತ್ತೇನೆ. ಹೊದಿಯಲಿಕ್ಕಾಗುತ್ತವೆ.

ಬೀರಮ್ಮ:—[ ಸ್ವಗತ ] ಆಹಾ ! ಬೀರಮ್ಮನ ' ಭಾಗ್ಯವೇ [ಪ್ರಕಾಶ] ಪುಣ್ಣೆ ಬರ್ಲಿ ತಾಯಿ. ನಿನ್ನ ಮಕ್ಕಳೂ ಮರೀ ಸುಖವಾಗಿ ಬಾಳ್ಲಿ. [ಇಬ್ಬರೂ ಪ್ರಸ್ಥಾನ].

## ನೋಟ ೨

[ ಬೆಳಗಿನ ೯ ಘಂಟೆ ಸ್ಥಳ-ಒಂದು ಬೀದಿ. ವಕೀಲ ಕೃಷ್ಣದಾಸರೂ ರೈತ ಭೀಮಪ್ಪನೂ ಮಾತಾಡುತ್ತ ಬರುತ್ತಿದ್ದಾರೆ. ಅವರ ಹಿಂದಿನಿಂದ ಮೆಲ್ಲಗೆ ರಂಗನಾಥನು ಅವರಾಡುವ ಮಾತುಗಳನ್ನೇ ಕೇಳುತ್ತ ಬರುತ್ತಿದ್ದಾನೆ]

ಕೃಷ್ಣದಾಸ— ಛೀ ಹುಚ್ಚಾ ನಿನಗೇನು ಮಳ್ಳುಗಿಳ್ಳು ಹಿಡಿಯಿತೇನು? ಈ ವರೆಗೆ ನೂರಾರು ರೂಪಾಯಿ ವೆಚ್ಚಮಾಡಿರುವೆ. ಇನ್ನು ೫೦ ರೂಪಾಯಿಗಳ ಸಲುವಾಗಿ ಹಿಂದುಮುಂದೆ ನೋಡಬೇಕು? ೫೦ ರೂಪಾಯಿಗೇನು? ಎಲ್ಲಿಂದಾದರೂ ಸಾಲ ತೆಗೆದುಕೊಂಡು ಬಾ- ಅಂದರಾಯಿತು. ಖಟ್ಲೇ ಗೆದ್ದು ಕೊಡುತ್ತೇನೆ

ಭೀಮಪ್ಪ—ಬೇಡಾ ಮಹಾರಾಯರೇ, ೫೦ ರೂಪಾಯಿ ಎಲ್ಲಿಂದ ತರುವದು. ದೇವರು ನನಗೆಂಥ ಬುದ್ಧಿ ಕೊಟ್ಟನೋ ನಾ ಕಾಣೆ ಒಂದು ನುಗ್ಗೀಗಿಡದ ಸಲುವಾಗಿ ನೂರಾರು ರೂಪಾಯಿ ಕಳಕೊಂಡೆ, ಆದೂ ಸಾಲದ ಗಂಟು

ಕೃಷ್ಣದಾಸ—ಗಿಡದ ಬೆಲೆ ಸ್ವಲ್ಪೇ ಆದರೂ ಹೇವ ಯಾರದು ನೀದು. ಗೆಲ್ಲಬೇಕೆಂಬ ಹೇವವಿದ್ದರೆ ೫೦ ರೂಪಾಯಿ ಎಲ್ಲಿಂದಾದರೂ ತರಲೇಬೇಕು. ೨೫ ರೂಪಾಯಿ ಕೋರ್ಟ ಫೀ ಯಾಗುತ್ತದೆ. ೨೫ ರೂಪಾಯಿ ವಕಾಲತ್ತ ಫೀ ನೋಡಿದಿಯಾ ನೀನು ಬಡವನೆಂದು ಇಪ್ಪತ್ತೈದೇ ರೂಪಾಯಿ ಫೀ ತೆಗೆದುಕೊಳ್ಳುತ್ತಿದ್ದೇನೆ.

ರಂಗನಾಥ—[ಸ್ವಗತ] ಆಹಹಾ, ಬಡವನ ಮೇಲೆ ಬಹಳ ಉಪಕಾರ ರಾಯರದು ನೋಡಿದಿರಾ, ಇವರು ವಕೀಲರು. ಬಡ ರೈತರೂ

ಕೂಲಿಕಾರರೂ ಕಷ್ಟಪಟ್ಟು ಹುಟ್ಟಿಸಿದ ದ್ರವ್ಯದಿಂದ ಪೋಷಿತರಾದವರು. ಅದೇ ಹಣದಿಂದ ವಿದ್ಯೆ ಕಲಿತು ಸುಶಿಕ್ಷಿತರಾದವರು ಆ ಉಪಕೃತ ಶ್ರಮಜೀವಿಗಳ ಸಲುವಾಗಿ ಏನು ಮಾಡುತ್ತಿದ್ದಾರೆ. ಲೂಟಿ-? ಉಂಡ ಮನೆಯ ಗಳ ಎಣಿಸುವ ಈ ಪುಂಡ ಸುಶಿಕ್ಷಿತರ ಒಂಡಾಟಿಕೆಯನ್ನು ಕಂಡರೆ ನನ್ನ ನೆತ್ತಿಯು ಧಗ ಧಗ ಉರಿಯುತ್ತದೆ-

ಭೀಮಪ್ಪ—ವಕೀಲ ಸಾಹೇಬರೇ, ಹಾಗಾದರೆ ನೀವೇ ೫ ರೂಪಾಯಿ ಸಾಲ ಕೊಟ್ಟುಬಿಡಿರಿ.

ಕೃಷ್ಣದಾಸ-ಮೊದಲೊಂದು ನೂರಾಐವತ್ತು ರೂಪಾಯಿ ನಾನೇ ಕೊಟ್ಟಿದ್ದೆ. ಈಗ ಮತ್ತೆ ನಾನೇ ಕೊಡಬೇಕೋ? ಆಯಿತು ಕೊಡಬಹುದು. ಆದರೆ ಅಡವು ಇಡಲಿಕ್ಕೆ ಏನಿದೆ ನಿನ್ನ ಬಳಿಯಲ್ಲಿ?

ಭೀಮಪ್ಪ—ಇದ್ದ ಒಂದು ಗದ್ದೆ ನಿಮ್ಮ ಕಡೆಗೇ ಅಡವು ಹಾಕಿದ್ದೇನೆ. ಇನ್ನೇನು ಅಡವು ಹಾಕ್ಲಿ ದೇವ್ರು?

ಕೃಷ್ಣದಾಸ—ನಿನ್ನ ಮನೆ ನಿನ್ನ ಹೆಸರಿಲೇ ಉಂಟೋ, ಏನು ಯಾರಿಗಾದರೂ ಅಡವು ಹಾಕಿದ್ದೀಯೋ?

ಭೀಮಪ್ಪ—ನನ್ನ ಹೆಸರಿನಲ್ಲೇ ಉಂಟು.

ಕೃಷ್ಣರಾವ—ಮನೆ ಬರೆದು ಕೊಡು ಅಂದರೆ ಸಾಲಕೊಡುತ್ತೇನೆ

ಭೀಮಪ್ಪ— ಆಯಿತು ಸ್ವಾಮಿ ಹಾಗೇ ಆಗಲಿ. ಹೇಗಾದ್ರು ಮಾಡಿ ಇನ್ನೊಂದು ಹತ್ತು ರೂಪಾಯಿ ಹೆಚ್ಚಿಗೆ ಕೊಡಿ ಮಕ್ಕಳ ಅರವಿ ಅಂಚಡಿನೂ ಹರಿದಿವೆ. ಹೇಣತೀ ಸೀರೆಯೂ ಹರಿದಿದೆ. ಇದೇ ಕೈಲಿ ತೆಗೆದುಕೊಂಡು ಬಿಡುತ್ತೇನೆ.

ಕೃಷ್ಣದಾಸ—ನಡೆ ಹಾಗಾದರೆ ನಮ್ಮ ಆಫೀಸ ಕಡೆಗೆ ಹೋಗಿ ಕಾಗದ ಪತ್ರಗಳನ್ನು ಮಾಡಿಕೊಳ್ಳುವಾ. (ಹೋಗಲನುವಾಗುವನು ಅಷ್ಟರಲ್ಲಿಯೇ)

ರಂಗನಾಥ—ವಕೀಲಸಾಹೇಬರೇ, ಸ್ವಲ್ಪ ತಡೆಯಿರಿ. ಈ ಬಡ ರೈತನ ಗೋಣನ್ನು ನಾನು ಮುರಿಯಗೊಡಲಾರೆ. ನಿರ್ದಯದಿಂದ ಬಡ ಆಕಳನ್ನು ವಧೆ ಮಾಡುವದಕ್ಕಾಗಿ ತೆಗೆದುಕೊಂಡು ಹೋಗುವ ಕಟುಕರಂತೆ ನೀವು ಈ ಬಡ ಒಕ್ಕಲಿಗನ ಹೊಲಮನೆಗಳನ್ನು ಅಪಹರಿಸಿ

ಇವನ ಪ್ರಾಣವನ್ನು ಹೀರಬೇಕೆಂದು ತೆಗೆದುಕೊಂಡು ಹೊರಟಿರೋ ? ಬೆಂಕೀ ಹಚ್ಚಲಿ ನಿಮ್ಮ ಸುಶಿಕ್ಷಿತತನಕ್ಕೆ ಸುಧಾರಣೆಯಂತೆ ನ್ಯಾಯವಂತೆ. ಇದೆಯೋ ನಿಮ್ಮ ಸುಧಾರಣೆ. ಶ್ರಮಜೀವಿಗಳು ಅನ್ನಾನ್ನಗತಿಕರಾಗಿ ಸಾಯುತ್ತಿರಲು ಶ್ರೀಮಂತರು ಅವರನ್ನು ಮತ್ತಿಷ್ಟು ಪೀಡಿಸುತ್ತ ಚೈನಿ ಚಲ್ಲಾಟದಲ್ಲಿ ಮೆರೆದಾಡುವದು ನ್ಯಾಯವಾದದ್ದೋ ? ಮೂರು ನಾಲ್ಕು ರೂಪಾಯಿ ಬೆಲೆಬಾಳುವ ಟೊಳ್ಳು ನುಗ್ಗೀಗಿಡದ ಸಲುವಾಗಿ ನೂರಿನ್ನೂರು ರೂಪಾಯಿ ಆ ಬಡವನಿಂದ ವೆಚ್ಚ ಮಾಡಿಸುವದಕ್ಕಾಗಿ ನಿಮ್ಮ ಮನಸ್ಸು ಹೇಗೆ ಒಪ್ಪಿತು? ಇಂಥ ಕಲಹಗಳಲ್ಲಿ ಬೀಳಬಾರದೆಂಬ ಉಪದೇಶ ಕೊಡುವದನ್ನು ಬಿಟ್ಟು ಹೇವ ಹೇವಯೆಂದುಬ್ಬಿ ಈ ಅಜ್ಞಾನಿಯನ್ನು ಸುಲಿದು ಬಿಟ್ಟಿರಾ? ಧಿಃಕ್ಕಾರವಿರಲಿ ನಿಮ್ಮ ಈ ಸೈತಾನೀ ಕೃತ್ಯಕ್ಕೆ. ಭೀಮಪ್ಪಾ. ಬಾರಣ್ಣಾ ಈ ವಕೀಲರ ಮಾಯಾಜಾಲದಲ್ಲಿ ಸಿಕ್ಕು ಒದ್ದಾಡಬೇಡಾ ಇವರಂಥ ಸುಶಿಕ್ಷಿತರಿಂದಲೇ ಶ್ರಮಜೀವಿಗಳು ಕಷ್ಟಪಡಬೇಕಾಗಿದೆ

ಕೃಷ್ಣದಾಸ—ಜೋಕೆ! ರಂಗಾ ನಿನ್ನ ಮಂಗಾಟವನ್ನು ಹೆಚ್ಚಿಸಬೇಡ. ನಾಲಿಗೆ ಉದ್ದವಾಯಿತೇನು? ಅಬ್ರುಲುಕ್ಸಾನದ ದಾವೇ ನಡೆಸಿ ಜೇಲಿಗೆ ಕಳಿಸೇನು ಹುಚ್ಚಾಟಿಕೆ ಮಾಡಿದರೆ

ರಂಗನಾಥ—ಸ್ವಾಮಿ, ಇಂಥ ಬೆದರಿಕೆಗೆ ಬೆದರಲು ನಾನೇನೂ ಮೊಲೆಯುಣ್ಣುವ ಎಳೆಗೂಸಲ್ಲ ಅಬ್ರುಲುಕ್ಸಾನದ ದಾವೇನಡೆಸುವಿರಾ? ಕಂಡಗ್ದನ್ನಾಡಿದರೆ ಕೆಂಡದಂಥ ಕೋಪವಲ್ಲವೇ? ಕೋಟ್ಯಾವಧಿ ಬಾಂಧವರನ್ನು ಅನ್ನವಸ್ತ್ರಗಳಿಲ್ಲದೆ, ಮಾನಮರ್ಯಾದೆರಹಿತರನ್ನಾಗಿ ಮಾಡಿ ಬಿಕ್ಕೆ ಬೇಡಹಚ್ಚಿದ ನಿಮ್ಮಂಥ ಶ್ರೀಮಂತರಿಗೆ ಯಾವ ಶಿಕ್ಷೆ ವಿಧಿಸಬೇಕು? ಎಚ್ಚರಿಕೆ ಒಂದಿಲ್ಲೊಂದು ದಿವಸ ಈ ಕಾಲವು ಬಂದೇ ತೀರುವದು. ಒಳ್ಳೇದು ಸದ್ಯಕ್ಕಂತೂ ನನಗೇನು ಮಾಡುವಿರೋ ಮಾಡಿರಿ. ಶ್ರಮಜೀವಿಗಳ ಮೇಲೆ ನಿಮ್ಮಂಥವರು ನಡೆಸಿದ ಪುಂಡಾಟಿಕೆಯನ್ನು ಖಂಡಿಸುವದಕ್ಕಾಗಿ ತರುಣರು ತಮ್ಮ ರುಂಡವನ್ನಾದರೂ ಅರ್ಪಿಸಲು ಸಿದ್ಧರಾಗಲೇಬೇಕಾಗಿದೆ.

ಕೃಷ್ಣದಾಸ—[ಶಾಂತವಾಗಿ] ರಂಗನಾಥ, ಒಬ್ಬ ಬಡರೈತನ ಮುಂದೆ ನನ್ನಂಥ ಶಿರಿವಂತನ ಅಪಮಾನ ಮಾಡುವದು ಉಚಿತವಲ್ಲ.

ರಂಗನಾಥ—ಇಡೀ ಜಗತ್ತಿನ ಮುಂದೆ ಅಪಮಾನ ಮಾಡುವದು ಮಾತ್ರ ಶಿರಿವಂತರಿಗೆ ಭೂಷಣವೇನೋ? ಇರಬಹುದು ತಮ್ಮ ದೃಷ್ಟಿಯಿಂದ ದುಡ್ಡೇ ದೊಡ್ಡಪ್ಪ ಅಲ್ಲವೇ?

ಕೃಷ್ಣದಾಸ—[ನಿರುಪಾಯನಾಗಿ] ಏನಾದರೂ ಹಾಳು ಗುಂಡೀ ಬಿದ್ದುಕೋ. ನಿನ್ನ ಸಂಗಡ ಮಾತಾಡುವವನೇ ಮೂರ್ಖ.

ರಂಗ—ನಾನೇಕೆ ಹಾಳು ಬಿದ್ದು ಹೋಗಲಿ. ರೈತರನ್ನು ಗೋಳಾಟಕ್ಕೀಡು ಮಾಡಿದವರನ್ನು ಹಾಳುಗೆಡುವುತ್ತೇನೆ.

ಕೃಷ್ಣ—ಭೀಮಪ್ಪಾ ನಿನಗೆ ಸಾಲಬೇಕಾಗಿದ್ದರೆ ಬಾ [ಪ್ರಸ್ಥಾನ]

ರಂಗ—ಅದು ಸಾಲವಲ್ಲ. ಶೂಲ. ಹೋಗಬೇಡ ಭೀಮಣ್ಣಾ.

ಭೀಮಪ್ಪ—ರಂಗನಾಥಪ್ಪನವರೇ, ವಕೀಲರನ್ನು ಸಿಟ್ಟಿಗೇಳಿಸಬಾರದಾಗಿತ್ತು ಅವರೇನಾದರೂ ಮಾಡಿಯಾರು?

ರಂಗ—ಅವರಿಗೆ ನೀವು ನಮ್ರರಾಗಿದ್ದಂತೆಲ್ಲ ಅವರು ಏರಹತ್ತಿದ್ದಾರೆ. ಅವರ ಮಾತಿಗೆ ಮರುಳಾಗದೆ, ಅವರು ಕೋಪಿಕೊಳ್ಳುವರೆಂದು ಬೆದರದೆ ನೀವು ರೈತರು ಸ್ಪಷ್ಟವಾಗಿ ನಮ್ಮ ಗೋಣು ಮುರಿಯಬೇಡಿರೆಂದು ಹೇಳಬೇಕು. ನೋಡಿದಿಯಾ ಒಂದು ಹಾಳು ನುಗ್ಗೀಗಿಡದ ಸಲುವಾಗಿ ನಿನ್ನನ್ನು ನಗ್ಗುನುಗ್ಗಾಗಿ ಮಾಡಿಬಿಟ್ಟರು.

ಭೀಮಪ್ಪ—ಹೌದು ರಾಯರೇ ನಮ್ಮಂಥ ತಿಳಿಗೇಡಿಗಳ ತಲೆಬೋಳಿಸುವದನ್ನೇ ನೋಡುತ್ತಿರುವರು.

ರಂಗನಾಥ—ಅದಿರ್‍ಲಿ. ನಿನ್ನ ಹೆಂಡತಿಗೂ ಮಕ್ಕಳಿಗೂ ಅರಿವೆ ಇಲ್ಲವೆನ್ನುತ್ತಿದ್ದೆಯಲ್ಲ. ಗೂಡಿಸುತ್ತೇನೆ ನಡೆ.

[ ಇಬ್ಬರೂ ಪ್ರಸ್ಥಾನ ]

## ನೋಟ ೩

[ಬೀರಮ್ಮನ ಗುಡಿಸಿಲಿನ ಹೊರಭಾಗ. ಗುಡಿಸಿಲಿನಲ್ಲಿ ಅವಳ ಬೇನೆಯ ಗಂಡನು ಮಲಗಿದ್ದಾನೆ. ಹೊಂಗೆ ಕಲ್ಲಿನ ಒಲೆಯ ಮೇಲೆ ಗಂಜಿಗಿಟ್ಟಿದ್ದಾಳೆ ತೆರಗೆಲೆಗಳೂ ಸೌದೆಗಳೂ ಬಿದ್ದಿವೆ. ಬೀರಮ್ಮ ಗುಡಿಸಿಲ ಮುಂದೆ ಕುಳಿತಿದ್ದಾಳೆ. ಡಾ ವಿಠ್ಠಲದಾಸನು ಮುಂದೆ ನಿಂತಿದ್ದಾನೆ]

ವಿಠ್ಠಲ—ಹೂ, ಬೀರಮ್ಮ ಇನ್ನೆರಡು ರೂಪಾಯಿಗಳನ್ನು ತೆಗೆ.

ಬೀರಮ್ಮ—ಡಾಕ್ಟರರೇ ನನ್ನ ಬಳಿಯಲ್ಲಿ ಸದ್ಯಕ್ಕೆ ಇವೆರಡೇ ರೂಪಾಯಿಗಳಿದ್ದವು ನಿಮ್ಮ ಹಣಾ ನಾನೇನು ಮುಣಗಿಸೋದಿಲ್ಲ. ನನ್ನ ಗಂಡನಿಗೆ ಗುಣವಾದ ಮೇಲೆ ಕೊಡುತ್ತೇನೆ

ವಿಠ್ಠಲ—[ಸ್ವಗತ] ಇವಳ ಗಂಡನ ಬದುಕುವಂತಿದ್ದರೆ ರೂಪಾಯಿಗಳಿಗಾಗಿ ನಾನೆಲ್ಲಿ ಇಷ್ಟು ಅವಸರ ಪಡಿಸುತ್ತಿದ್ದೆ? ಈಗ ಸಾಯುವನೋ ಇನ್ನೊಂದು ಗಳಿಗೆಗೆ ಸಾಯುವನೋ. ಉಪಾಯದಿಂದ ಈಗಲೇ ಸಿಕ್ಕಷ್ಟು ವಸೂಲ ಮಾಡಬೇಕು [ಪ್ರಕಾಶ] ತಡಮಾಡಬೇಡ ಈ ಹೊಲಸು ಓಣಿಯಲ್ಲಿ ನಾನು ಬಹಳ ಹೊತ್ತು ನಿಲ್ಲಲಾರೆ. ಇಲ್ಲಿಯವರೆಗೆ ಬಂದದ್ದೇ ನನ್ನ ತಪ್ಪಾಯಿತೇನು?

[ಕಮಲಾಬಾಯಿಯು ರಂಗನಾಥನೊಂದಿಗೆ ಪ್ರವೇಶಿಸುವಳು. ಓಣಿಯೊಳಗಿನ ಹೇಸಿಗೆಯನ್ನು ಕಂಡು]

ಕಮಲಾ—ಹಾಳು ಸುಧಾರಣೆ, ನಗರ ಸುಧಾರಣೆಗಾಗಿ ಮುನಸೀಪಾಲಿಟಿಯಂತೆ. ಯಾತಕ್ಕೆ ಮುಂಡಮೋಚಲಿಕ್ಕೆ ಇವೆಲ್ಲಾ. ಬರೀ ಕುಳಿತು ಕೂಳು ತಿನ್ನುವ ಧನವಂತರ ಬೀದಿಗಳಿಷ್ಟು ಹಸನಾಗಿದ್ದರೆ ಆಯಿತೇನು? ಕೂಲಿಕಾರರ ಓಣಿಗಳಲ್ಲಿಯೂ, ರೈತರ ಓಣಿಗಳಲ್ಲಿಯೂ, ಅಸ್ಪೃಶ್ಯರ ಓಣಿಗಳಲ್ಲಿಯೂ ಎಷ್ಟು ವಿಪರೀತ ಕೊಳಚೆಯಿದು? ದುಡಿಯುವವರಿಗೆ ನರಕ. ಕುಳಿತುಣ್ಣುವವರಿಗೆ ಸ್ವರ್ಗ. ಇದೆಲ್ಲಿಯ ನ್ಯಾಯವಿದು.

ವಿಠ್ಠಲ—ಹೂ ಬೀರಮ್ಮ ಸುಮ್ಮನೆ ಕಾಲಹರಣ ಮಾಡಬೇಡ. ಒಳಗಿದ್ದಷ್ಟು ತೆಗೆದುಕೊಡು.

ಬೀರಮ್ಮ—ಇಲ್ಲಸ್ವಾಮಿ. ಇದ್ದು ಇಲ್ಲವೆಂದು ಹೇಳುವಾಕೆಯಲ್ಲ ನಾನು

ಕಮಲಾ—[ಸ್ವಗತ] ಅಯ್ಯೋ, ಪಾಪ! ಭಾವನವರು ಈ ಬಡ ವಳಿಗೇನೋ ತೊಂದರೆ ಕೊಡುತ್ತಿದ್ದಾರೆ. ಏನು ಮಾಡಲಿ? ನಾನು ನಡುವೆ ಬಾಯಿ ಹಾಕಿದರೂ ಕಷ್ಟ ಬಿಟ್ಟರೂ ಕಷ್ಟ ಆಗಲಿ ಅದದ್ದಾಗಿ ಹೋಗಲಿ [ ಪ್ರಕಾಶ ] ಏನದು ಭಾವನವರೇ, ಆ ಬಡವಳ ಮೇಲೆ ಎಷ್ಟು ಜುಲುಮೆ ಮಾಡುತ್ತೀರಿ ?

ವಿಠ್ಠಲ--ಅತ್ತಿಗೇ ಬಾಯಿಮುಚ್ಚು. ನೀನೇಕೆ ಇಲ್ಲಿಗೆ ಬಂದೆ. ನಿನ್ನದೇನಿದೆ ಇಲ್ಲಿ ಕೆಲಸ. ಈ ನಿನ್ನ ತಮ್ಮನಾದ ರಂಗನಾಥನ ಬೆನ್ನು ಹತ್ತಿದರೆ ಮನೆ ಹಾಳು ಮಾಡಿಕೊಂಡು ಹೋಗಬೇಕಾದೀತು?

ಬೀರಮ್ಮ--ತಾಯಿಾ ಈಗೆರಡು ರೂಪಾಯಿ ಇದ್ದವು ಕೊಟ್ಟಿದ್ದೇನೆ. ಇನ್ನೆರಡೇ ರೂಪಾಯಿ ಬಾಕೀ ಉಳೀತದೆ, ನಿಮ್ಮ ಭಾವನವರಿಗೆ ತಡೀಲಿಕ್ಕೆ ಹೇಳಿರಿ.

ಕಮಲಾ-ಭಾವನವರೇ ಅವಳ ಆ ರೂಪಾಯಿಗಳನ್ನೂ ವಾಪಸ ಕೊಟ್ಟು ಬಿಡಿರಿ. ಅವರಿಂದ ರೂಪಾಯಿ ತೆಗೆದುಕೊಳ್ಳುವದು ನಮ್ಮ ಧರ್ಮವಲ್ಲ. ಅವರ ದುಡಿತದಿಂದಲೇ ಅಲ್ಲವೇ ನಾವು ಲಕ್ಷಾಧೀಶರಾದದ್ದು. ಅವರ ದುಡಿತದಿಂದಲೇ ಅಲ್ಲವೇ ನೀವು ಡಾಕ್ಟರರಾದದ್ದು. ಈ ಜಗತ್ತಿನೊಳಗಿನ ಯಾವದೇ ಸುಧಾರಿಸಿದ ವರ್ಗವಾಗಲೀ, ಶ್ರೀಮಂತ ವರ್ಗವಾಗಲೀ ಶ್ರಮ ಜೀವಿಗಳಾದ ಕೂಲಿಕಾರರ ಹಾಗು ರೈತರ ದುಡ್ಡಿನಿಂದಲೇ ಉತ್ಪನ್ನವಾಗಿವೆಯೆಂಬುದನ್ನು ಅರಿಯಿರಾ? ನಾವು ಇಂಥ ಆಧಾರಸ್ತಂಭರ ಸುಖಕ್ಕಾಗಿ ಎತ್ನಿಸಬೇಕೋ ಅಥವಾ ರಸಾತಳಕ್ಕೆ ಮೆಟ್ಟಬೇಕೋ ನೀವೇ ವಿಚಾರಿಸಿರಿ.

ವಿಠ್ಠಲ–ಅತ್ತಿಗೇ ನೀವು ಬಹಳ ಉದ್ದ ನೀರಿಗಿಳಿದಿರಿ. ಜೋಕೆ! ನೀವೆಷ್ಟಂದರೂ ಹೆಂಗಸರು; ನಿಮ್ಮೊಡನೆ ವಾದಿಸುವದು ನಮ್ಮ ಧರ್ಮವಲ್ಲ. ಅಣ್ಣನವರ ಮುಂದೆ ಹೇಳಿ ಮಾಡಿಸುತ್ತೇನೆ ತಡೆಯಿರಿ[ಪ್ರಸ್ಥಾನ]

ಕಮಲಾ-ಬೀರಮ್ಮ ಹೇಗಿದೆ ನಿನ್ನ ಗಂಡನಿಗೆ, ಯಾಕೆ ಏನೂ ಸದ್ದಿಲ್ಲ. ಕೆಮ್ಮು ಕಡಿಮೆಯಾದಂತೆ ಕಾಣುತ್ತದೆ.

ಬೀರಮ್ಮ-ಸಿದ್ದೆ ಹತ್ತಿರಬಹುದು ನೋಡಿಕೊಂಡು ಒರುತ್ತೇನೆ. [ಗುಡಿಸಿಲಿನಲ್ಲಿ ಪ್ರವೇಶಿಸುವಳು]

ಕಮಲಾ – ಈ ಗೇಣು ಗುಡಿಸಲಿನಲ್ಲಿ ಗಂಡಹೆಂಡತಿ ನಾಲ್ಕಾರು ಮಕ್ಕಳು ವಾಸಿಸಬೇಕು. ಆದರೆ ನಮ್ಮಂಥ ಶಿರಿವಂತರು ನಾಲ್ಕಾರು ಮೇಲುಪ್ಪರಿಗೆಯು ಮನೆಯಲ್ಲಿ. ತಮ್ಮಾ ನೋಡಿದೆಯಾ ಇವರ ಸಂಸಾರ. ಒಡಕು ಮಡಕಿಯೇನು? ಹರಕು ಬುಟ್ಟಿಯೇನು? ನಾನಂತೂ ಇಂಥ ಬಡವರ ಸ್ಥಿತಿಯನ್ನು ಇನ್ನು ನೋಡಲಾರೆ.

ರಂಗನಾಥ—ಹೌದಕ್ಕಾ ನನಗೂ ಇದನ್ನು ನೋಡಿ ಬೇಜಾರ ಬಂದಿದೆ. ಇವರ ಕಷ್ಟನಿವಾರಣೆ ಮಾಡುವದು ಸುಲಭವಾಗಿದ್ದರೆ ಎಂದೋ ಮಾಡಿಬಿಡುತ್ತಿದ್ದೆ. ಅದಕ್ಕಾಗಿ ಬಹಳ ಫಂಡು ಬೇಕಾಗುತ್ತದೆ

ಕಮಲಾ – ಅದರ ಯೋಚನೆಯೇಕೆ ರಂಗಾ. ದೇವರ ದಯ ದಿಂದ ದುಡ್ಡಿನ ಎಲ್ಲ ಒಡೆತನವನ್ನೂ ಅವರು ನನ್ನ ಕೈಯಲ್ಲಿಯೇ ಕೊಟ್ಟಿದ್ದಾರೆ. ಇಂದೇ ನನ್ನ ಎಲ್ಲ ಆಭರಣಗಳನ್ನೂ ತಿಜೋರಿಯೊಳ ಗಿನ ಎಲ್ಲ ದ್ರವ್ಯವನ್ನೂ ಕೊಟ್ಟುಬಿಡುತ್ತೇನೆ. ಕಾರ್ಯವು ಬೇಗನೆ ಆರಂಭವಾದರೆ ಸಾಕು

ರಂಗ—ಅಕ್ಕಾ ಹೀಗೆ ಮಾಡಿದಲ್ಲಿ ನಿನ್ನ ಗಂಡನು ಕೋಪಿಸಿಕೊ ಳ್ಳದೆ ಇರುವನೇ?

ಕಮಲಾ-ಕೋಪಿಸಿಕೊಳ್ಳುವದಿಷ್ಟೇಯೇಕೆ. ನನ್ನ ಪ್ರಾಣವನ್ನು ಸಹ ಹೀರಲೊಲ್ಲರೇಕೆ? ಸಾವಿರಾರು ಜನರಿಗೆ ಸುಖವಾಗುವಂತಿದ್ದರೆ ನನ್ನ ಪ್ರಾಣ ಹೋದರೇನೂ ತಪ್ಪಾಗಲಾರದು. (ಬೀರಮ್ಮನು ಗುಡಿ ಸಲಿನೊಳಗಿಂದ ರೋದಿಸುತ್ತ ಹೊರಗೆ ಬರುವಳು)

ಬೀರಮ್ಮ-ಅಯ್ಯೋ ದೇವರ,.... ನನ್ನ ಗಂಡನ್ನ ನುಂಗಿದಿ ಯಲ್ಲೋ ಅವ್ವಾ ನನ್ನ ಗಂಡ ಹೋದಾ. ಇನ್ನೇನುಗತಿಮಾ ಡ್ಲಿಮ್ಮಾ, ನನ್ನ ಬಂಗಾರದಂತಾ ಗಂಡ ಹೋದನಲ್ಲವ್ವಾ...ಅಯ್ಯೋ ನನ್ನ ಮಕ್ಕಳಿಗಾರುಗತಿ? ಹಯ್ಯಯ್ಯೋ....ಹಯ್ಯಯ್ಯೋ....

ರಂಗ—ಅಳಬೇಡ ಬೀರಮ್ಮಾ ದೇವರಿದ್ದಾನೆ. ನಿನ್ನ ಮಕ್ಕಳ್ನ ನೋಡಲಿಕ್ಕೆ ಅಕ್ಕಾ ದಹನ ವಿಧಿಯ ಕಾರ್ಯಕ್ಕಾಗಿ ಜನರನ್ನು ಕರೆ

ತರಬೇಕಲ್ಲ. ನಡೆ ನಿಮ್ಮ ಗಿರಣೀ ಪೈಕೀ ಎಂಟ್ಹತ್ತು ಜನರನ್ನು ಕಳಿಸಿ ಕೊಡುವಾ ನಡೆ.

(ತೆರೆಬೀಳುವದು)

## ನೋಟ ೪

[ವೇಳೆ-ಬೆಳಗಿನ ಹತ್ತು ಗಂಟೆ. ಒಂದು ಬೀದಿ. ಭೀಮಣ್ಣನ ಮುಖದ ಮೇಲೆ ಉಲ್ಲಾಸವೇ ಉಲ್ಲಾಸ. ಕೈಯಲ್ಲಿ ಒಂದು ಆಭರಣ ಹಿಡಿದುಕೊಂಡು ಪ್ರವೇಶಿಸುವನು.]

ಭೀಮಣ್ಣ—ಕಮಲಾಬಾಯಿಯವರ ಪುಣ್ಯದಿಂದ ಅನೇಕ ಜನರ ಸಾಲವು ಬಯಲಾಯಿತು. ಕಮಲಾಬಾಯಿಯಂಥ ವೀರಮಾತೆಯರೇ ದೇಶದ ತುಂಬ ಹುಟ್ಟಿದರೆ ದೇಶವೆಲ್ಲ ಸುಖವಾಗಿ ಬಾಳಬಹುದು.

(ಕೃಷ್ಣದಾಸನೂ ವಿಠ್ಠಲದಾಸನೂ ಪ್ರವೇಶಿಸುವರು)

ಕೃಷ್ಣ—ಏನದು ಭೀಮಣ್ಣ ಕೈಯಲ್ಲಿ?

ಭೀಮ—(ಭಯಭೀತನಾಗಿ) ಏನೂ.... ಇಲ್ಲ.

ಕೃಷ್ಣ—ಏನೋ ಹಿಡಿದುಕೊಂಡಿದೀಯಲ್ಲ?

ಭೀಮ—ನನ್ನ ಹೆಂಡತಿಯ ಟೀಕೆ.

ಕೃಷ್ಣ—(ಅದನ್ನು ಕಸಿದು) ಇದನ್ನು ನೀನು ನನ್ನಲ್ಲಿ ಆಡವು ಇಟ್ಟಿದ್ದಿಲ್ಲವೇ? ಇದು ಹೇಗೆ ಬಂತು ನಿನ್ನ ಹತ್ತರ?

ಭೀಮ—ಕಮಲಮ್ಮನವರು ಕೊಟ್ಟಿದ್ದಾರೆ.

ಕೃಷ್ಣ—ಅವರಿಗೇನು ಕಾಡುತ್ತಿದೆ ಕೊಡಲಿಕ್ಕೆ.

ಭೀಮ—ಹೌದು ಸ್ವಾಮಿ, ಎಲ್ಲ ಅಡವುದಾರರ ಮಾಲನ್ನೂ ಅವರವರಿಗೆ ವಾಪಸ ಕೊಟ್ಟುಬಿಟ್ಟರು.

ಕೃಷ್ಣ—(ಎದೆ ಎದೆ ಬಡಿದುಕೊಂಡು) ತಮ್ಮಾ ವಿಠ್ಠಲಾ ಘಾತವಾಯಿತು. ಅತ್ತಿಗೆ ನಮ್ಮ ಸರ್ವಸ್ವವನ್ನೂ ಹಾಳುಮಾಡಿದಂತೆ ಕಾಣುತ್ತಿದೆ. ಆವಳ ತಮ್ಮನೆನ್ನು ನಮ್ಮ ಮನೆಗೆ ಬರಗೊಡುತ್ತಿದುದೇ ನಮ್ಮ ತಪ್ಪಾಯಿತು. ಕಲಿತ ಹೆಂಗಸೆಂದು ಆವಳ ಬದಿ ಎಲ್ಲ ಬೀಗದ ಕೈಗಳನ್ನೊಪ್ಪಿಸಿದರೆ ಅವಳು ಹೀಗೆ ಮಾಡಿದಳಲ್ಲವೇ?

ವಿಠ್ಠಲ ಮೊದಲು ಮನೆಗೆ ನಡೆ ಏನೇನು ಸಂಭವಿಸಿದೆಯೋ ನೋಡುವಾ ಏನೋ ಪೊಳ್ಳೆಂದು ತಿಳಿದಿದ್ದಾಳೆ ನಮ್ಮನ್ನು. ಅವಳ ಪ್ರಾಣವನ್ನು ಹೀರಿಸಿ ಬಿಡದಿದ್ದರೆ ನಾನು ವಿಠ್ಠಲನೇ ಅಲ್ಲ. (ಪ್ರಸ್ಥಾನ)

ಭೀಮಪ್ಪ—ಸರ್ವಸ್ವವೂ ಹಾಳಾಯಿತಂತೆ. ಏನು ಬಹಳ ಕಷ್ಟ ಪಟ್ಟು ಇಟ್ಟಿದ್ದರೋ ಹೇಳುವಂತಿಲ್ಲ ಪಾಪ! ನಮ್ಮ ತಾಯಮ್ಮನಿಗೆಲ್ಲಿ ಪೀಡಿಸುವರೋ ಈ ಪುಣ್ಯಾತ್ಮರು?

## ನೋಟ ೫

(ಸಮಯ ಸಂಜೆಯ ನಾಲ್ಕು ಗಂಟೆ. ಸ್ಥಳ–ಗೋಕುಳದಾಸನ ಬಂಗ್ಲೆಯ ದಿವಾಣಖಾನೆ ಮೂವರೂ ಬಂಧುಗಳು ಕುರ್ಚಿಯ ಮೇಲೆ ಕುಳಿತಿದ್ದಾರೆ ಅಪರಾಧಿಯಂತೆ ಕಮಲಾಬಾಯಿಯು ಮುಂದೆ ನಿಂತಿದ್ದಾಳೆ)

ಕೃಷ್ಣ– ಅಣ್ಣಾ ನಿನ್ನ ಮೆತ್ತನ್ನ ನಡತೆಯಿಂದಲೇ ಅತ್ತಿಗೆಯಿಷ್ಟು ತಲೆಗೇರಿ ಕುಳಿತಳು.

ವಿಠ್ಠಲ— ನಿಮಗೇನು ಅಧಿಕಾರವಿತ್ತು ನಮ್ಮ ದ್ರವ್ಯದ ಮೇಲೆ? ಯಾರದಾದರೂ ಮನೆಗಂಟನ್ನು ಹಾಳುಮಾಡಿ ಹತ್ತೀಬಿತ್ತಿದರಾಯಿತೇನು?

ಕಮಲಾ—ಅದಾರ ಮನೆಯಗಂಟು. ಅದರ ಮೇಲೆ ಯಾರ ಅಧಿಕಾರವಿದೆ?

ಗೋಕುಲ—(ಕೈಯಲ್ಲಿಯ ಬೆತ್ತವನ್ನು ಬೀಸಿ) ನಿಮ್ಮಪ್ಪನ ಮನೆಯ ಗಂಟೇನು? ಏಕೆ ಬಹಳ ಎದುರುತ್ತರ ಕೊಡಹತ್ತಿದೆ. ನಾವು ಮೂವರು ಗಳಿಸಿದ ಗಂಟದು ಅದರ ಮೇಲೆ ನಮ್ಮ ಸಂಪೂರ್ಣ ಹಕ್ಕಿದೆ ನೀನು ಕೇಳದೆ ಅದನ್ನು ಹೇಗೆ ವೆಚ್ಚ ಮಾಡಿದೆ ಹೇಳು?

ಕಮಲಾ—ಯಾರಪ್ಪನ ಮನೆಯ ಗಂಟೂ ಅಲ್ಲ ಅದು. ರಟ್ಟೆ ಮುರಿದು ದುಡಿಯುವ ಶ್ರಮಜೀವಿಗಳಿಂದುತ್ಪನ್ನವಾದ ಗಂಟು ತಾವು ಮೂವರೂ ಗಳಿಸಿರುವರಂತೆ. ನಿಮ್ಮ ಬಾಗಾಯಿತಿನಲ್ಲೇನು ರೂಪಾ

ಯಿಯ ಗಿಡಗಳಿಲ್ಲ. ಸರಿಯಾಗಿ ವಿಚಾರಿಸಿ ನೋಡಿದಲ್ಲಿ ಆ ಗಂಟಿನ ಮೇಲೆ ಕೇವಲ ಬಡ ಒಕ್ಕಲಿಗರ ಹಾಗೂ ಕೂಲಿಕಾರರ ಅಧಿಕಾರವೇ ಇದೆ.

ಕೃಷ್ಣ—ಯಾಕೆ ಅದನ್ನು ನಾವೇ ಸಂಪಾದಿಸಿದ್ದೇವೆ. ಆದರ ಒಡೆಯರು ನಾವೇ ಆಗಬಲ್ಲೆವು

ಕಮಲಾ—ಅದು ಹೇಗೆ? ಕಳ್ಳರು ತಾವು ಕಳವು ಮಾಡಿ ಸಂಪಾದಿಸಿದ ಹಣಕ್ಕೆ ತಾವೇ ಒಡೆಯರೆಂದರೆ ನಡೆಯಲಾಗದು. ಆ ಕಳವಿನ ಮಾಲು ಆದರ ಮೂಲ ಒಡೆಯರಿಗೇ ದೊರೆಯಬೇಕು. ಕಳ್ಳರು ಶಿಕ್ಷೆಗೆ ಮಾತ್ರ ಬಾಧ್ಯಸ್ಥರು.

ವಿಠ್ಠಲ—ಅಣ್ಣಾ ನಾನಿನ್ನು ನಿನ್ನ ಹೆಂಡತಿಯ ಉಚ್ಚಾಟನೆಯನ್ನು ಸಹಿಸಲಾರೆ (ಕೃಷ್ಣದಾಸನು ಮೇಜಿನಮೇಲಿನ ಬೀಗದ ಕೈ ತೆಗೆದುಕೊಂಡು ಅಲ್ಲಿದ್ದ ತಿಜೋರಿಯನ್ನು ತೆರೆಯುವನು )

ಗೋಕುಲ—ರಕ್ಕಸಿ, ನಮ್ಮನ್ನು ಕಳ್ಳರಿಗಿಂತಲೂ ಕಡೆಯಾಗಿ ಮಾಡಿದೆಯಾ? ಪಾಪಿಣಿ! ಇದೆಯೇ ನಿನ್ನ ಪತಿ ಭಕ್ತಿ.

ಕಮಲಾ- ಪ್ರಾಣನಾಥಾ. ನಾನೇನು ನಿಮ್ಮನ್ನು ತಿರಸ್ಕರಿಸುವದಕ್ಕಾಗಿ ಮಾತನಾಡಿಲ್ಲ ಇದ್ದ ಸಂಗತಿಯನ್ನಾಡಿದೆ. ನೀವೆಷ್ಟು ನನಗಾಡಿದರೂ ಕೋಪವಿಲ್ಲಾ. ನಿಮ್ಮ ವಿಷಯವಾಗಿ ನನ್ನಲ್ಲಿ ಪ್ರೇಮವಿದೆಯೋ ಇಲ್ಲವೋ ಎಂಬುದಕ್ಕೆ ಈ ಹೃದಯವೇ ಸಾಕ್ಷಿಯಾಗಿದೆ. ಬೇಕಾದರೆ ಸೀಳಿ ನೋಡಿರಿ.

( ಕೃಷ್ಣದಾಸನು ತಿಜೋರಿಯಿಂದ ಮುಂದೆ ಬಂದು ಬೀಗದ ಕೈ ಬಿಸಾಡುವನು. )

ಕೃಷ್ಣ-ಅಣ್ಣಾ ಈ ತಿಜೋರಿಯಲ್ಲಿಯೂ ಒಂದು ಒಡಕು ಕಾಸು ಇಲ್ಲವಲ್ಲ. ಏನಿದು ಅನರ್ಥ ?

ಗೋಕುಲ— ( ತನ್ನ ಮಗನನ್ನು ಕುರಿತು ) ಹೊರಗೆ ಯಾರು ? ರಾಮಾ, ಮೂಲೆಯಲ್ಲಿಯ ಬಡಿಗೇ ತೆಗೆದುಕೊಂಡು ಬಾ.

ಕಮಲಾ— ರಾಮನೆಲ್ಲಿಯೋ ಹೋಗಿದ್ದಾನೆ ಅವನೇಕೆ ಈ ಗೊಂದಲದಲ್ಲಿ? ನಾನೇ ತೆಗೆದುಕೊಂಡು ಬರುವೆನು. (ಹೊರಡಬೇಕೆನ್ನುವಷ್ಟರಲ್ಲಿಯೇ ರಾಮನ ಪ್ರವೇಶ)

ರಾಮು-ಅಪ್ಪಾ ಇನ್ನು ಮುಂದೆ ಗಿರಣಿಗಳು ಬಂದಂತೆ, ಐನೂರು ರಾಟೆಗಳ ಸಿದ್ಧತೆ ನಡೆದಿದೆ. ಇಂದು ಚರ್ಖಾ ಸಂಘದ ಸ್ಥಾಪನೆ ಯಿದೆ. ಅದಕ್ಕಾಗಿ ಮೆರವಣಿಗೆಯಿದೆ. ರಂಗನಾಥಮಾವನು ನಿನಗೆ ಕರೆದುಕೊಂಡು ಬರಹೇಳಿದ್ದಾನೆ. ಬೇಗ ನಡೆ. ಅಪ್ಪಾ ನೀವೂ ಉತ್ಸವಾ ನೋಡಲಿಕ್ಕೆ ಬನ್ನಿರಿ. ಕೂಲಿಕಾರರ ಓಣಿಗಳು ಈಗ ಸೊಗ ಸಾಗಿವೆ. ಸ್ವಚ್ಛವಾಗಿವೆ. ನೋಡಬನ್ನಿ

ಗೋಕುಲ—ಆಗದೇನು ಮಾಡ್ಯಾವು. ಯಾರಾದರೂ ತಿಜೋರೀ ಹಾಳು ಮಾಡಿದರೆ ಸ್ವಚ್ಛವಾಗದೆ ಇರುವವೇ?

ರಾಮು—ಇದರಲ್ಲೇನು ಕೆಟ್ಟಿತು? ತಿಜೋರಿಯಲ್ಲಿಯ ದುಡ್ಡನ್ನು ಕೊಳೆಯಿಟ್ಟು ಸಾವಿರಾರು ಜನರನ್ನು ಕೊಲ್ಲುವದರಲ್ಲೇನು ಶ್ರೇಯ ಸ್ಕರವುಂಟು? ಪಾಪ ಬಡವರೂ ಒಂದೊಪ್ಪತ್ತು ಬದುಕಬಾರದೇ?

ಗೋಕುಲ— ಈಕೆ ಕಲಿಸಿದಳು ಕಾಣುತ್ತದೆ. ದಾನಶೂರತನ. ಉತ್ಸವಾ ನೋಡಬೇಕಂತೀಯಾ ಉತ್ಸವಾ (ಅಲ್ಲಿದ್ದ ಕಬ್ಬಿಣದ ಕುರ್ಚಿ ಯಿಂದ ಕಮಲೆಯ ತಲೆಗೆ ಬಲವಾಗಿ ೮-೧೦ ಏಟು ಹಾಕುವನು. ಏಟು ತಿನ್ನುವಾಗಲೇ)

ಕಮಲೆ— ಪತಿರಾಜಾ, ಈ ಸತಿಯ ಮೇಲೆ ನಿನ್ನ ಸಂಪೂರ್ಣ ಹಕ್ಕಿದೆ ನಿನ್ನ ಇಷ್ಟವಿದ್ದಷ್ಟು ಹೊಡೆ [ಏಟು ಬಹಳ ಬೀಳಲು ಒಮ್ಮೆಲೆ ಬಿದ್ದು ಬಿಡುವಳು]

ರಾಮು—ತಂದೇ, ನನ್ನ ವೀರಮಾತೆಯನ್ನು ಬಡಿಯಬೇಡ, ಅವಳು ಯಾವ ಅಪರಾಧವನ್ನೂ ಮಾಡಿಲ್ಲ. ಜಗತ್ತಿಗೆಲ್ಲ ಮಾರ್ಗವನ್ನು ತೋರಿಸುವದಕ್ಕಾಗಿ ಅವಳು ಸ್ವಾರ್ಥತ್ಯಾಗವನ್ನು ಮಾಡಿದ್ದಾಳೆ. ಅಯ್ಯೋ, ಇದೇನಿದು ನನ್ನ ಮಾತೆಯ ಅವಸ್ಥೆ. ಪ್ರಾಣವನ್ನು ನೀಗಿ ದಳೇನೋ, ದ್ರವ್ಯದ ಹುಚ್ಚಿನಿಂದ ನನ್ನ ವೀರಮಾತೆಯನ್ನು ಕೊಂದ ರಲ್ಲ ಈ ಅಧಮರು. ನನಗಾರಿನ್ನು ಗತಿ? ರಂಗಣ್ಣಮಾವಾ ವು.... ಹು... ಹು... ಹು... (ಅಳತೊಡಗುವನು. ರಂಗನಾಥನ ಪ್ರವೇಶ)

ರಂಗ—ಅಕ್ಕಾ ಕಮಲಕ್ಕಾ ಮೆರವಣಿಗೆ ಹೊರಟಿದೆ ಬೇಗ ಬಾ.

ರಾಮ—ಎಲ್ಲಿಯ ಅಕ್ಕಾ. ಅಕ್ಕನಿನ್ನು ಸ್ವರ್ಗದಲ್ಲಿ ?

ಕೃಷ್ಣ-ತಮ್ಮಾ ವಿಠ್ಠಲಾ, ಈ ಮುಟ್ಠಾಳ ರಂಗನಿಗೆರಡು ಏಟು ಹಾಕೋಣ ಹಿಡಿ.

ರಂಗ—ಹತಭಾಗಿಗಳೇ ನನ್ನ ಅಕ್ಕನನ್ನು ಕೊಂದಿರಾ ? ಇವಳ ಬದಲು ನನ್ನನ್ನು ಕೊಲ್ಲಬೇಕಾಗಿತ್ತು. ಎಲ್ಲ ಬಡಒಗ್ಗರಿಗೂ ಅನ್ನ ಪೂರ್ಣಾದೇವಿಯಾದ ನನ್ನ ಅಕ್ಕನು ನಿಮ್ಮ ಕಣ್ಣುಗಳಲ್ಲಿ ಕುಕ್ಕಿದಳೇ ಅಯ್ಯೋ ಎಂದು ಕೂಗುವ ಬಡವರಿಗೆ ರೊಟ್ಟಿಯನ್ನಾರು ಕೊಡುವ ರಿನ್ನು? ಅಕಟಕಟಾ? (ತೆರೆಯ ಹೊರಗೆ "ರೈತರಿಗೆ ಜಯವಾಗಲಿ ಕೂಲಿ ಕಾರರಿಗೆ ಜಯವಾಗಲಿ'ಯೆಂದು ಜಯಜಯಕಾರಗಳು ಕೇಳಿಬರುವವು)

ವಿಠ್ಠಲ—ಇದೋ ಅಣ್ಣಾ, ಕೂಲಿಕಾರ ಮೆರವಣಿಗೆ ಬಂದಿತು. ಅವರಿಗೆ ಈ ಸುದ್ದಿಯು ಗೊತ್ತಾದರೆ ನಮ್ಮ ಪಾಡು ಏನಾಗುವದೋ ?

ಕೃಷ್ಣ—ಹೌದು, ಅಣ್ಣಾ ವಿಠ್ಠಲನ ಹೇಳಿಕೆಯು ಸುಳ್ಳಲ್ಲ ನಮ್ಮ ದಿಲ್ಲೀ ಆಟ ಮುಗಿಯಿತೆಂದು ತಿಳಿಯುವದೇ ?

ಗೋಕುಲ—ಹಾಗಾದರೆ ನಡೆಯಿರಿ. ಪಲಾಯನ ಮಾಡುವಾ. (ಓಡಿ ಹೋಗುವರು)

(ಭೀಮಣ್ಣ ವ ಬೀರಮ್ಮರ ಪ್ರವೇಶ)

ಭೀಮಣ್ಣ— ಅಳುವ ಸ್ವರವು ಒಂದೇಸವನೇ ಕೇಳ ಬರುತ್ತದೆ. ಆದದ್ದಾದರೂ ಏನು?

ಬೀರಮ್ಮ—ಅಯ್ಯೋ ಶಿವನೆ. ನಮ್ಮ ತಾಯಮ್ಮನಿಗೇನಾಯ್ತು.

ರಂಗ—ಬಾಂಧವರೇ ನನ್ನಕ್ಕನನ್ನು ಕೊಂದು ಹಾಕಿದರು.

ಬೀರಮ್ಮ—ಅಯ್ಯೋ ನಿಜವೇ, ನನ್ನ ಬಂಗಾರದಂಥ ತಾಯಿ ನ್ನ ಹೇಗೆ ಕೊಂದಿದ್ದಾರಾದೀತು ? ತಾಯಮ್ಮಾ. ನಿನ್ನಂಥಾ ಪುಣ್ಯ ವಂತಿ ನಮಗೆಲ್ಲಿ ದೊರೆಯಬೇಕಿನ್ನು. ಬಡವರ ಮಾತೇ ನಮ್ಮನ್ನಗಲಿ ದೆಯಾ? ಎಲೋ ಯಮದೂತಾ ಬಡವರ ರೊಟ್ಟಿಯನ್ನಪಹರಿಸಿದೆಯಾ

ಭೀಮಣ್ಣ-ಪುಣ್ಯವಂತರಿಗೆ ಈಗ ಕಾಲವಿಲ್ಲ. ಪಾಪಿಷ್ಟರದೇ ಚಲ್ಲಾಟ. ಮಹಾರಾಯ್ತಿ ಲಕ್ಷಗಟ್ಲೆ ಹಣ ವೆಚ್ಚಮಾಡಿ ನಮ್ಮೆಲ್ಲ ರಿಗೂ ಸುಖವನ್ನುಂಟು ಮಾಡಿದಳು.

ರಾಮ-ಅವ್ವಾ, ನಿನ್ನನ್ನು ಅಗಲಿ ಹೇಗೆ ಬಾಳಲಿ? ನಿನ್ನ ಜೊತೆಗೆ ನನ್ನನ್ನೂ ಕರೆದೊಯ್ಯ ಬಾರದಿತ್ತೇ? (ಅಳತೊಡಗುವನು)

ರಂಗ—ಎಲ್ಲರೂ ಹೀಗೆ ಅಳತೊಡಗಿದರೆ ಹೋದ ಜೀವ ಎಂದಾ ದರೂ ಬರುವದೇನು? ಉಪಾಯವಿಲ್ಲ. ಸುಮ್ಮನಾಗಿರಿನ್ನು. ದೇವ ರನ್ನು ಪ್ರಾರ್ಥಿಸಿರಿ. ಅವಳು ಹಿಡಿದ ಕಾರ್ಯವನ್ನು ಕೊನೆಗಾಣಿಸು ತ್ತೇವೆಂದು ನಿಶ್ಚಯ ಮಾಡಿರಿ.

ಭೀಮ—ದೇವಾ, ನಿನ್ನ ಲೋಕದಲ್ಲಾದರೂ ಕಮಲಮ್ಮನವ ರಿಗೆ ಸುಖವಾಗಿರಿಸು.

ರಾಮ—ತಾಯೇ, ಕೂಲಿಕಾರರ ಮತ್ತು ರೈತರ ಗೋಳಾಟ ವನ್ನು ದೂರ ಮಾಡುವದಕ್ಕಾಗಿ ನಿನ್ನಂತೆಯೇ ತಿಜೋರಿಗಳಲ್ಲಿ ಅಡಗಿ ಸಿಟ್ಟ ದ್ರವ್ಯವನ್ನು ಬೈಲಿಗೆಳೆಯುವದಕ್ಕಾಗಿ ಸಾವುಕಾರ ಜನರಿಗೆ ಉಪ ದೇಶ ಮಾಡುತ್ತ ತಿರುಗಾಡುತ್ತೇನೆ.

ರಂಗ—ಅಕ್ಕಾ, ನಾನಾದರೂ ಕೂಲಿಕಾರರಿಗೂ ರೈತರಿಗೂ, ಉಪದೇಶ ಕೊಟ್ಟು ಸುಶಿಕ್ಷಿತ ಜನರನ್ನೂ ಶಿರಿವಂತರನ್ನೂ ದಾರಿಗೆ ತರಲು ಯತ್ನಿಸುತ್ತೇನೆ. ಬಡವರ ರೊಟ್ಟೀ ಚಿಂತೆಯನ್ನು ಹೋಗ ಲಾಡಿಸಲು ಯತ್ನಿಸುತ್ತೇನೆ.

ರಾಮ—ಭೀಮಣ್ಣಾ, ಎಲ್ಲರೂ ಹಿಡಿಯಿರಿ. ಶವವನ್ನು ಹೊರ ಗಡೆ ಒಯ್ಯೋಣ [ ಎಲ್ಲರೂ ಹಿಡಿಯುವರು ] ನನ್ನ ವೀರಮಾತೆಯ ಆತ್ಮಕ್ಕೆ ಶಾಂತಿ ದೊರೆಯಲಿ, ಎಲ್ಲ ಕಡೆಗೂ ಇಂಥ ಮಾತೆಯರೇ ಹುಟ್ಟಲಿ [ತೆರೆ ಬೀಳುವದು]

—॥ ಸಂಪೂರ್ಣ ॥—

# ತ್ಯಾಗದ ಗುಡಿ



“ ಸೀತಾ ನನಗೆ ಬೇಜಾರು ಕೊಡಬೇಡ ಹೊರಡು ಇಲ್ಲಿಂದ ” ರಾಮರಾಯ ತನ್ನ ಹೆಂಡತಿಗೆ ಹೇಳಿದ.

“ ಅದೇಕಿಷ್ಟು ಬೇಸರ ? ಇತ್ತೀಚೆಗೆ ನನ್ನನ್ನು ಕಂಡರಿಷ್ಟು ಬೇಸರಿಕೆಯಲ್ಲವೇ ? ನಮ್ಮಂಥ ಅಬಲೆಯರಿಗೇನು ತಿಳಿಯಬೇಕು. ನಿಮ್ಮ ವಿಚಾರ?

“ ಸಾಕು. ನಿನ್ನ ತಲೆಹರಟೆ ಬೇಕಿಲ್ಲ. ಯಾವಾಗಲೂ ಹಾಳು ಹರಟೆ ! ನಗಚ್ಯಾಟಿಗೆ ! ಬೇರೆ ಏನೂ ಉದ್ಯೋಗವಿಲ್ಲವೇ ನಿನಗೆ ?

“ ಅವ್ವಯ್ಯ ! ಅದೇನು ಅಷ್ಟೊಂದು ಹರಿಹಾಯುವದು? ನಾನೇ ಅಲ್ಲವೇ ನಗೆಯಾಟ ತಲೆ ಹರಟೆಗಳಲ್ಲಿ ಕಾಲಕಳೆಯುವವಳು ? ಹಾಗಾದರೆ ನಿಮಗೇಕೆ ತೊಂದರೆ ಇಕೊಳ್ಳಿ ಹೊರಟೆ” ದುರುದುರು ನುಡಿಯುತ್ತ ಸೀತೆ ಅಲ್ಲಿಂದ ಹೊರಟುಹೋದಳು. ರಾಮರಾಯ ವಿಚಾರ ತರಂಗಗಳಲ್ಲಿ ಲೀನನಾಗಿ ಸ್ವಸ್ಥವಾಗಿ ಆರಾಮು ಕುರ್ಚಿಯ ಮೇಲೆ ಒರಗಿಕೊಂಡ.

ಸೀತೆ ಅಲ್ಲಿಂದ ಹೊರಟು ಹೋದಳೇನೋ ನಿಜ. ದೂರ ಹೋಗಿರಲಿಲ್ಲ. ರಾಮರಾಯನ ಕೊಠಡಿಯ ಹೊರಗಡೆಯಲ್ಲಿಯೇ ನಿಂತುಕೊಂಡಿದ್ದಳು. ಅವಳಿಗೆ ಎಲ್ಲೆಡೆಯೂ ಅಂಧಕಾರವಾಗಿ ತೋರತೊಡಗಿತು ಕಣ್ಣಿಗೆ ಕತ್ತಲುಕವಿದಂತಾಯಿತು. ಸಂಶಯ ಪಿಶಾಚಿಯು ಅವಳ ಮುಂದೆ ನರ್ತನ ಮಾಡತೊಡಗಿತು ಬಗೆಬಗೆಯ ವಿಚಾರಗಳಿಗೆ ಅವಳ ತಲೆಯು ಎಡೆಗೊಟ್ಟಿತು.

ನನ್ನ ಮೇಲೆ ಅವರಿಷ್ಟು ಬೇಸರಪಡಲಿಕ್ಕೆ ಕಾರಣವೇನಿದ್ದೀತು ? ನನ್ನಿಂದಾದ ಪ್ರಮಾದವಾದರೂ ಏನು ? ಅವರು ಹೇಳಿದಂತೆ ಕುಣಿಯು

ತ್ತಿರುವೆನಲ್ಲವೆ? ಅವರು ಅಸಹ್ಯಪಡಬಾರದೆಂದು ತುಳಸೀ ಪೂಜೆ ಬಿಟ್ಟೆ. ದೇವಸ್ಥಾನಕ್ಕೆ ಹೋಗುವದನ್ನು ಬಿಟ್ಟು ಅವರೊಂದಿಗೆ ವಾಕಿಂಗಕ್ಕೆ ಸಹ ಹೋಗಹತ್ತಿದೆ. ಅವರ ಮನವನ್ನು ಮೆಚ್ಚಿಸುವದಕ್ಕಾಗಿ ಆರ್ಯ ಜನರಿಗೊಪ್ಪುವ ವಸ್ತ್ರಾಲಂಕಾರಗಳನ್ನು ತ್ಯಜಿಸಿ, ಪಾಶ್ಚಾತ್ಯ ಪದ್ಧತಿಯ ಉಡವುತೊಡವುಗಳನ್ನು ಧರಿಸಿದೆ. ಅವರೂ ಇವರು ಸಿಡಿ ಹಾಯುತ್ತಿರುವರಲ್ಲ. ಇಲ್ಲ! ಇವರಾವದೊ ಸ್ತ್ರೀಯ ವ್ಯಾಮೋಹದಲ್ಲಿ ಸಿಲ್ಕಿಕೊಂಡಂತೆ ಕಾಣುತ್ತದೆ. ಹಾಗೇನಾದರೂ ಇರಬಹುದೇನು ...... ಛಿ! ಸುಮ್ಮನೆ ಪತಿಯ ವಿಷಯವಾಗಿ ಹೊಲಸು ಕಲ್ಪನೆಗಳನ್ನೇಕೆ ಮಾಡಲಿ? ಹಾಗಾದರೆ ಏನು ಕಲ್ಪಿಸಲಿ? ನಾನೇ ಅಪರಾಧಿಯಾಗಿಲ್ಲವಷ್ಟೆ? ತರತರದ ಕಲ್ಪನೆಗಳಲ್ಲಿ ಹುದುಗಿಕೊಂಡು ಸೀತೆ ಇಳಿಮೋರೆಯಿಂದ ಪತಿಯ ಖುರ್ಚಿಯ ಕಡೆಗೆ ದೃಷ್ಟಿಯನ್ನಿಟ್ಟು ಬಾಗಿಲ ಬಳಿ ತಟಸ್ಥಳಾಗಿ ಕಲ್ಲುಗಂಬದಂತೆ ನಿಂತಿದ್ದಳು.

ಅವಳು ಸುಧಾರಕಳಾದುದು ಇತ್ತೀಚೆಗೆ. ಅದೂ ಸ್ವೇಚ್ಛೆಯಿಂದಲ್ಲ. ಗಂಡನ ಉಪದೇಶದಿಂದ. ಹಳ್ಳಿಯ ಹುಡಿಗೆ. ಸುಧಾರಣೆ ಮೊದಲಾದವುಗಳೇನೂ ಅವಳಿಗೆ ಗೊತ್ತಿರಲಿಲ್ಲ ಧಾರ್ಮಿಕಳು. ತುಳಸೀ ಪೂಜೆ, ಗೌರೀ ಪೂಜೆ ಮೊದಲಾದ ವ್ರತೋಪಾಸನೆಗಳೂ, ನೇಮ ನಿತ್ಯಗಳೂ ಮಾತ್ರ ಅವಳಿಗೆ ಗೊತ್ತು. ಅದರೆ ಹೆಂಗಸು; ಅವಳಿಗೆಲ್ಲಿಯ ಸ್ವಾತಂತ್ರ್ಯ. ಗಂಡನ ಮನವನ್ನು ರಮಿಸಬೇಕಾದರೆ ಅವನ ಇಚ್ಛೆಯಂತೆ ನಡೆಯಲೇಬೇಕಾಗುತ್ತದೆ ರಾಮರಾಯನಿಗೆ ಇವುಗಳಲ್ಲೊಂದೂ ಸರಿ ಬರುತ್ತಿರಲಿಲ್ಲ. ಸೀತೆ ತನ್ನ ನೇಮ ನಿತ್ಯಗಳನ್ನು ಬಿಡಬಾರದೆಂದು ಮೊದಮೊದಲು ಬಹಳ ಯತ್ನಿಸಿದಳು. ಆದರೆ ಅವಳೀ ಯತ್ನವು ಯಶಸ್ವಿಯಾಗಿ ಬಾಳಲಿಲ್ಲ. ಅತ್ತೆ ಜೀವಿಸಿರುವ ವರೆಗೆ ಹಾಗೂ ಹೀಗೂ ಗಂಡನನ್ನು ತಪ್ಪಿಸಿ ಪೂಜೆ ಪುನಸ್ಕಾರಗಳನ್ನು ಮಾಡುತ್ತಿದ್ದಳು. ಮೇಲಾಗಿ ಅವಳಿಗಿನ್ನೂ ರಾಮರಾಯ ಸುಧಾರಣೆಯ ಪಾಠಗಳನ್ನು ಚನ್ನಾಗಿ ಕಲಿಸಿರಲಿಲ್ಲ. ತಾಯಿಗೆ ಹೆದರುತ್ತಿದ್ದುದರಿಂದ ಅವನ ಸ್ವೈರವರ್ತನೆಗೆ ತಡೆಯಾಗಿತ್ತು. ತಾಯಿ ಸ್ವರ್ಗಸ್ಥಳಾದದ್ದೇ ತಡ. ಅವನಿಗೆ ಸಂಪೂರ್ಣ ಸ್ವಾತಂತ್ರ್ಯ ದೊರೆಯಿತು. ಸೀತೆಗೆ ಅಲ್ಪ

ಸ್ವಲ್ಪ ಓದುಬರಹ ಕಲಿಸಿದ್ದಲ್ಲದೆ ಅವಳ ಆಸ್ತಿಕ ಭಾವನೆಗಳನ್ನಡ ಗಿಸಿ ತನ್ನ ಭೋಗ ಮಂದಿರದ ದೇವಿಯನ್ನಾಗಿ ಮಾಡಿಕೊಂಡ. ಪಾಶ್ಚಾತ್ಯ ಹಾವಭಾವಗಳನ್ನೂ ಫ್ಯಾಶನ್ನು ಅಂತಾರಲ್ಲ ಅದನ್ನೂ ಚೆನ್ನಾಗಿ ಕಲಿಸಿಕೊಟ್ಟ. ಸ್ವೇಚ್ಛಾಚಾರಿಗಳಿಗೆಲ್ಲಿಯ ದೇವರು? ಈಗ ಸೀತೆಯು ದೇವರನ್ನೂ ಅರಿಯಳು ದಿಂಡರನ್ನೂ ಅರಿಯಳು. ಔಷ ಧದ ಮಟ್ಟಿಗಾದರೂ ತುಳಸೀ ಗಿಡ ಅವರ ಮನೆಯಲ್ಲಿ ಇದೆಯೋ ಇಲ್ಲವೋ ಸಂಶಯ. ಭೋಗ್ಯ ವಸ್ತುಗಳೇ ಅವಳಿಗೀಗ ದೇವತೆಗಳು. ಬಣಬಣಗಿನ ರೇಶಿಮೆಯ ಉಡುಪು ಧರಿಸುವದು, ಮೋರೆಗೆ ಬಣ್ಣ ಬಳಿದುಕೊಳ್ಳುವದು, ಜವ್ವನದ ಬಿಂಕದಿಂದ ಮೂಗು ಮುರಿಯುತ್ತ ಅಡ್ಡಾಡುವದು ಇವೇ ಅವಳ ವ್ರತೋಪಾಸನೆಗಳು. ಮನೆಗೆಲಸಗಳಿಗಾಗಿ ಬೇಕಾದಷ್ಟು ಆಳುಹೋಳುಗಳು ಕೈಯಲ್ಲಿ. ಕೇಳುವದೇನು? ಇವಳು ಯಾವಾಗಲೂ ರಾಮರಾಯನ ಬಳಿಯಲ್ಲಿಯೇ ಇದ್ದುಕೊಂಡು ಕುಲುಕುಲು ಹಾಸ್ಯಮಾಡುತ್ತ ಸರಸಸಲ್ಲಾಪಗಳಲ್ಲಿಯೇ ತೊಡಗಿ ರುತ್ತಿದ್ದಳು. ಜೈನಿಚಲ್ಲಾಟಗಳಲ್ಲಿ ತುಂಬಾ ಮೈಯುಂಡು ಹೋಗಿ ದ್ದಿತು. ಯಾವ ಸುಖಪುರುಷನಿಗೆ ಒಮ್ಮೆಲೆ ತನ್ನ ಸುಖಮಾರ್ಗದಲ್ಲಿ ತಡೆ ಬಂದರೆ ದುಃಖವಾಗಲಿಕ್ಕಿಲ್ಲ. ದೊಡ್ಡದಾದ ಗುಡ್ಡದ ಮೇಲೆ ಕರೆದೊಯ್ದು ಆಳವಾದ ಕೊಳ್ಳವೊಂದರಲ್ಲಿ ನೂಕಿ ಬಿಟ್ಟರೆ ಎಷ್ಟು ಭೀಕರವಾದ ವ್ಯಥೆಯಾಗುವದೋ ಅದಕ್ಕಿಂತ ಹೆಚ್ಚು ವ್ಯಥೆಯು ರಾಮರಾಯನ ಇದೀಗಿನ ಬೇಸರದ ಮಾತುಗಳಿಂದ ಸೀತೆಗೆ ಆಗಿದ್ದಿತು ಸಾವಿರಾರು ಸಿಡಿಲುಗಳು ಒಮ್ಮೆಲೆ ಮೈಮೇಲೆ ಕಡಿದುಕೊಂಡು ಬಿದ್ದಂತೆ ಆಯಿತು. ಕಣ್ಣೀರು ಧಾರೆಧಾರೆಯಾಗಿ ಹರಿಯ ತೊಡಗಿ ದವು. ರಾಮರಾಯನ ಬೇಸರದ ಕಾರಣವೇನಿರಬಹುದೆಂದು ವಾಚ ಕರು ಸಹ ಅರಿತುಕೊಳ್ಳಲು ಆತುರರಾಗುವದು ಸಹಜವಿದೆ. ಮೊದಲು ಅವನ ಅಲ್ಪ ಪರಿಚಯವನ್ನಿಷ್ಟು ಮಾಡಿಕೊಳ್ಳುವಾ.

ರಾಮರಾಯ ಬಿರೂರಿನ ಸಿರಿವಂತರಲ್ಲಿ ಹಿರಿದಾದವ. ಬೀ. ಏ. ಬಿ. ಎಲ್. ವಕೀಲ. ವಕಾಲತ್ತಿನ ಸಂಪಾದನೆ ಚನ್ನಾಗಿತ್ತು. ಕೌನ್ಸಿ ಲ್ಲಿನ ಮೆಂಬರನೂ ಇದ್ದ. ಜನರಿಗೆಲ್ಲ ಬೇಡಾಗಿದ್ದರೂ ಹಣ

ವೊಂದರ ಬಲವಾದ ಆಧಾರದಿಂದ ಪ್ರತಿಸಲವೂ ಆರಿಸಿಬರುತ್ತಿದ್ದ. ಇವನು ಸುಧಾರಕಾಗ್ರೇಸರಿಯೆಂಬುದು ಸೀತೆಗೆ ಕೊಟ್ಟ ಪಾಠದ ಮೇಲಿಂದ ವಾಚಕರಿಗೆ ಮನದಟ್ಟಾಗಿದೆ ಇರದು. ತಂದೆ ತಾಯಿಗಳು ಇವನ ಸುಖಕ್ಕೆ ಎಡರಾಗಬಾರದೆಂದೋ ಏನೋ ಬೇಗನೆ ತೀರಿಕೊಂಡು ಬಿಟ್ಟಿದ್ದರು. ಮನೆಯಲ್ಲಿ ಹೆಂಡತಿ ಮತ್ತು ಮೂರು ಚಿಕ್ಕ ಮಕ್ಕಳು ಇಷ್ಟೇ ಇವನ ಪ್ರಪಂಚ. ಇವನಿಗೆ ದಾನಧರ್ಮದ ಹೆಸರಿನ ವಾಸನೆ ಕೂಡ ಸಹಿಸುವದಾಗುತ್ತಿರಲಿಲ್ಲ ಬಡಬಗ್ಗರಿಂದ ಲಂಚ ತಿನ್ನುವನು. ತನ್ನ ರೈತರಿಗೆ ವಿಪರೀತ ತೊಂದರೆ ಕೊಡುವನು, ಅವರನ್ನು ಅನ್ನಾನ್ನ ಗತಿಕರನ್ನಾಗಿ ಮಾಡಿ ಕೂಡ ಹಣ ಸೆಳೆಯಲು ಯತ್ನಿಸುವನು. ಇವ ನೇನೋ ರೈತರ ಹಿತ್ಯೈಷಿಯಂತೆ [?] ಢಂಬಾಚಾರ ಕೊಚ್ಚುವನು ! ಕೌನ್ಸಿಲ್ಲಿಗೆ ಆರಿಸಿಬರುವಮುಂದೆ ಇವನ ಹಸ್ತಪತ್ರಿಕೆ ಓದಬೇಕು. ರೈತರ ಹಿತಕ್ಕಾಗಿ ಆಕಾಶದಿಂದ ಇಳಿದು ಬಂದ ದೇವಾಧಿದೇವನೋ ಎಂಬಂತೆ ಹೊಗಳಿಕೊಂಡಿರುತ್ತಾನೆ ಆರಿಸಿ ಬಂದ ಮೇಲೆ ರೈತರ ಕಡೆಗೆ ಕಣ್ಣೆತ್ತಿ ಸಹ ನೋಡುವದಿಲ್ಲ. ಅದೇಕೆ ನೋಡಿಯಾನು? ಅವ ನೇನು ರೈತರ ಹಿತಕ್ಕಾಗಿ ಆರಿಸಿ ಬಂದಿರುವನೋ ? ಹಾಗಿದ್ದರೆ ಮತ ಪಡೆಯುವದಕ್ಕಾಗಿ ಅಂದಾದುಂದಿನ ವೆಚ್ಚವನ್ನೇಕೆ ಮಾಡು ತ್ತಿದ್ದ. ಯಾರಿಂದಲೊ ಹೀರಿಕೊಂಡ ದುಡ್ಡು. ಏನೋ ಪಾಪ! ನಾಲ್ಕು ಜನರಲ್ಲಿ ಪ್ರತಿಷ್ಠಿತನಾಗಿ ಹೆಂಡತಿಯೊಡನೆ ಫಸ್ಟ ಕ್ಲಾಸ ಗಾಡಿ ಯಲ್ಲಿ ಕುಳಿತು ಮೋಜು ಮಾಡುತ್ತಾ ಅಡ್ಡಾಡುವ ಆಶೆ. ಅವನು ಮಾಡದ ಚೈನಿಯೊಂದೂ ಉಳಿದಿರಲಿಲ್ಲ. ಆದರೂ ಅವನ ಆತ್ಮಕ್ಕೆ ಆನಂದವಿಲ್ಲ. ಶಾಂತಿಯಿಲ್ಲ. ಜನರು ನಿಜವಾಗಿ ಮನಃಪೂರ್ವಕವಾಗಿ ತನ್ನನ್ನು ಆದರಿಸುವದಿಲ್ಲೆಂದು ಅವನ ಅಂತರಾತ್ಮವು ಹೇಳುತ್ತಿತ್ತು. ಇನ್ನೂ ಅವನ ಹೃದಯ ಅಷ್ಟೊಂದು ಕಲ್ಲಾಗಿದ್ದಿಲ್ಲವೇನೋ ?

ರಾಮರಾಯನಿಗೆ ಇಂಗ್ಲೀಷು ಓದುವದರಲ್ಲಿ ಬಹಳ ಪ್ರೀತಿ. ದಿನಾಲು ಏನಾದರೂ ಓದುತ್ತಲೇ ಇದ್ದ. ಮಹಾತ್ಮರ ಆತ್ಮಕತೆಯು

ನ್ನೊಮ್ಮೆ ಓದಿಬಿಡಬೇಕೆನ್ನಿಸಿತು. ಸರಳವಾದ ಭಾಷೆ. ಒಳ್ಳೇ ಅನು ಭವದ ವಿಚಾರಗಳು ಅದನ್ನು ಲಕ್ಷಪೂರ್ವಕವಾಗಿ ಓದತೊಡಗಿದ ಓದಹಿದುತ್ತಿದ್ದಂತೆ ನಿತ್ಯವೂ ಅವನಿಗೆ ತ್ಯಾಗದ ಹುಚ್ಚು ಹಿಡಿಯತೊಡ ಗಿತು. ಪೂರ್ಣ ಮುಗಿಸುವಷ್ಟರಲ್ಲಿಯೇ ಹುಚ್ಚು ಚೆನ್ನಾಗಿ ಅಂಟಿ ಕೊಂಡುಬಿಟ್ಟಿತು ತ್ಯಾಗದಿಂದಲೇ ಮಹಾತ್ಮರು ನಿಜಾನಂದವನ್ನು ಅನುಭವಿಸುತ್ತ ಜಗದ್ವಿಖ್ಯಾತರಾಗಿ ಮೆರೆಯುತ್ತಾರೆಂದು ಅವನಿಗನಿಸಿತು ತಾನೂ ಅವರ ಚರಿತ್ರೆಯಂತೆ ನಡೆದರೆ ಒಳಿತಾಗುವದಲ್ಲವೇ ಎಂದು ಕೊಂಡ. ತಾನು ಗೈದ ಪಾಪ ಕರ್ಮಗಳನ್ನೂ ಬಡವರ ಮೇಲೆ ಮಾಡಿದ ಅನ್ಯಾಯಗಳನ್ನೂ ನೆನಿಸಿ ನೆನಿಸಿಕೊಂಡು ಮರ ಮರ ಮರು ಗಿದ. ವಿಲಾಸಸುಖ ಸಾಮ್ರಾಜ್ಯದಿಂದ ಹೇಗೆ ಜಾರಿಕೊಳ್ಳಬೇಕೆಂಬ ಆಲೋಚನೆಯೇ ಅವನಿಗೆ ಹತ್ತಿತು. ಅವನಿಗೆ ಅನೇಕ ತೊಡಕು ಗಳನ್ನು ಬಿಡಿಸಬೇಕಾಗಿತ್ತು. ಅವನೂ ಅವನಂಥ ಕೆಲವು ಕಾಂಡಾಲ ಚೌಕಳೀ ಗೆಳೆಯರೂ ಸೇರಿ ಮಿತ್ರಸಮಾಜವೊಂದನ್ನು ಸ್ಥಾಪಿಸಿದ್ದರು. ಅದಕ್ಕಾಗಿ ಒಂದು ಕಟ್ಟಡವೂ ಟೆನ್ನೀಸಕೋರ್ಟೂ ಬೇಕಲ್ಲವೇ? ಅದನ್ನು ಕಟ್ಟಿಸತೊಡಗಿದ್ದ. ಅದು ಯಾರ ಹಿತಕ್ಕಾಗಿ ಗೊತ್ತೇಂಟೋ? ಬಡವರ ಹಿತಕ್ಕಾಗಿ ಅಲ್ಲ! ಬಡವರ ರಕ್ತವನ್ನು ಹೀರುವ ಡೊಳ್ಳು ಹೊಟ್ಟೆಯ ಸಿರಿವಂತರ ಮನರಂಜನೆಗಾಗಿ! ಆದರೆ ಈಗ ಇದೂ ಒಂದು ಅವನ ಪಶ್ಚಾತ್ತಾಪ ಪಟ್ಟ ಹೃದಯದ ಮೇಲೆ ಸಿಡಿಲಿನಂತೆ ಏಟು ಕೊಡುವಂತಹದಾಗಿದ್ದಿತು. ಅವನಿಗೆ ತನ್ನ ಸ್ವಾರ್ಥಾಚರಣೆಗಳ ನೆನಪು ಆದ ಆದಂತೆ ಕಸಿವಿಸಿಯಾಗುತ್ತಿತ್ತು. ಸದ್ಯಕ್ಕೆ ಅತನು ಆರಾಮು ಕುರ್ಚಿಯ ಮೇಲೆ ಮಲಗಿದುದಾದರೂ ಅದೇ ಕಸವಿಸಿಯ ದಾಸನಾಗಿ ಕಸವಿಸಿಯ ಕಿಚ್ಚಿನಲ್ಲಿಯೇ ಅವನಿಗೆ ತ್ಯಾಗದ ಹಸಿವು ಉಂಟಾಗ ತೊಡಗಿತ್ತು. ತ್ಯಾಗದಲ್ಲಿಯೇ ನಿಜವಾದ ಸುಖವಿದೆ ಎನಿಸ ತೊಡಗಿತ್ತು. ತುಸು ಹೊತ್ತಿನಲ್ಲಿಯೇ ಅದೇನೋ ನಿರ್ಣಯಿಸಿಕೊಂಡು ಕುರ್ಚಿಯ ಮೇಲಿ ಎದ್ದು ಕುಳಿತ. ಈಗ ಹೆಂಡತಿಯ ಮೇಲಿನ ಕೋಪ ಇಳಿದಿದ್ದಿತು. ಬಾಗಿಲ ಬಳಿ ದುಃಖಿಸುತ್ತ ನಿಂತ ಹೆಂಡತಿಯನ್ನು ಕಂಡ

“ಅಳುವದಕ್ಕೇನಾಯಿತೇ ಬಾ ಇಲ್ಲಿ? ಹೆಂಗಸರ ಹೃದಯವೆಂದರೆ ಬಹಳ ಮೃದು ನೋಡು, ಪಾರಿಜಾತ ಪುಷ್ಪಕ್ಕಿಂತಲು ಕೋಮಲ. ಕೂಡಲಿ ದುಃಖವು ಬಾಡಿ ಹೋಗುತ್ತದೆ” ಎಂದು ಮೆಚ್ಚು ನೋಟದಿಂದ ನೋಡುತ್ತಾ ಅವಳನ್ನು ಕೂಗಿದ. ಕರೆಯದಾರಿಯನ್ನೇ ನಿರೀಕ್ಷಿಸುತ್ತಿದ್ದ . ಸೀತೆಯು ಒಳಗೆ ಹೋಗಿ ಅವನ ಪಕ್ಕದಲ್ಲಿಯೇ ಬೇರೊಂದು ಕುರ್ಚಿಯ ಮೇಲೆ ಕುಳಿತುಕೊಂಡಳು

“ಹೀಗೆ ಮಾಡಿದರೆ ಹೇಗೆ ಸೀತಾ ತ್ಯಾಗದ ಗುಡಿಯೊಂದನ್ನು ಕಟ್ಟುವ ಆಲೋಚನೆಯುಲ್ಲಿದ್ದೆ. ವಿಚಾರದ ಗೊಂದಲದಲ್ಲಿ ಏನಾದರೂ ಆಡಿರಬಹುದು. ಸಿಟ್ಟು ಹಚ್ಚಿಕೊಳ್ಳಬೇಡ.'' ರಾಮರಾಯ ಮೆಲುದನಿಯಿಂದ ನುಡಿದ.

ಸೀತೆಗೆ ರಾಮರಾಯನ ಮಾತಿನ ಅರ್ಥವಾಗಲಿಲ್ಲ. ತ್ಯಾಗದ ಗುಡಿಯೆಂದರೇನಿರಬಹುದು ? ಎಂಬ ತೊಡಕಿನಲ್ಲಿ ಬಿದ್ದಳು ದೇವರ ಗುಡಿಯನ್ನ ಬೇಕೇ ತನ್ನ ಗಂಡನಿಗೆ ಗುಡಿಗುಂಡಾರಗಳ ನೆರಳು ಸಹ ಆಗುತ್ತಿರಲಿಲ್ಲ ಅದೂ ಒಂದು ಯಾವುದಾದರೊಂದು ಆಟಪಾಟದ ಕಚೇರಿಇರಬಹುದೆಂದು ತಿಳಿದುಕೊಂಡಳು.

“ಕ್ಲಬ್ಬು. ಟೆನ್ನೀಸಕೋರ್ಟು ಕಟ್ಟಿಸುವ ಕೆಲಸವಂತೂ ಮುಗಿಯಲಿ ಆ ಮೇಲೆ ಏನನ್ನಾದರೂ ಕಟ್ಟಿಸುವಿರಂತೆ. ಅದಕ್ಕೇಕಿಷ್ಟು ಘೋರ ವಿಚಾರ?'' ಎಂದು ಕೇಳಿದಳು.

ಹೆಂಡತಿಗೆ ತನ್ನ ಮಾತಿನ ಅರ್ಥವಾಗಲಿಲ್ಲೆಂದು ರಾಮರಾಯನಿಗೆ ಗೊತ್ತಾಯಿತು. ಅವಳು ಕ್ಲಬ್ಬಿನ ನೆನಪು ಮಾಡಿಕೊಟ್ಟಕೂಡಲೆ ಹೊಟ್ಟೆಯಲ್ಲಿ ಒಂದು ವಿಧವಾದ ಸಂಕಟ ಹುಟ್ಟಿತು.

“ಸೀತಾ, ನಾನು ಕಟ್ಟಿಸುತ್ತಾ ಇದ್ದುದು, ಟೆನ್ನಿಸ ಕೋರ್ಟಲ್ಲ. ಯಮನ ದರ್ಬಾರ ಮಂದಿರ! ರೈತರ ಸುಲಿಗೆ ಮಾಡಿ, ಬಡವರ ರಕ್ತ ಹೀರಿ ಅವರ ದುಡ್ಡಿನ ಮೇಲೆ ಥಾಟುಮಾಟನಿಂದ ಚೈನೀ ಹೊಡೆಯುವ ಶಿರಿವಂತರೊಡನೆ ಚಲ್ಲಾಟ ಮಾಡಬೇಕೆಂದಿದ್ದೆ. ಎಂಥ ಘೋರ ಪಾಪ ಕೃತ್ಯವಿದು ? ಸ್ವಾರ್ಥಪರ ಶಿರಿವಂತರಿಗಿಂತ ಯಮದೂತರನ್ನೂ

ಎಷ್ಟೋ ಪಾಲಿಗೆ ಮೇಲು ! ಅವರು ತಟ್ಟನೆ ಜೀವವನ್ನಾದರೂ ತೆಗೆದುಕೊಳ್ಳುತ್ತಾರೆ. ಆದರೆ ಶಿರಿವಂತರ ಮಾರ್ಗವೇ ಬೇರೆ. ಅವರು ಬಡವರ ರಕ್ತವನ್ನು ಜಿಗಳಿಯಂತೆ ಒಂದೇಸವನೆ ಹೀರಿ ಹೀರಿ ಹಣ್ಣುಗಾಯಿ ನೀರುಗಾಯಿ ಮಾಡಿಬಿಡುತ್ತಾರೆ. ಇನ್ನು ನಾನಂತೂ ಈ ದುಮಾರ್ಗವನ್ನು ಹಿಡಿಯಲಾರೆ. ಸೀತಾ ಆ ಹಾಳು ಕಲ್ಲಬ್ಬನ್ನೇ ತ್ಯಾಗದ ಗುಡಿಯನ್ನಾಗಿ ಮಾಡಿಬಿಟ್ಟರೆ ಹೇಗಾದೀತು.

"ಆದಕ್ಕೆ ಪೂಜಾರಿಯನ್ನೊಂದು ನಿಯಮಿಸಬೇಕಷ್ಟೇ? " ಸೀತೆ ಕೇಳಿದಳು.

"ಬೇಡ! ಬೇರೆಯವರನ್ನು ಪೂಜೆಗೆ ನೇಮಿಸಿದರೆ ನಮ್ಮ ಇಷ್ಟ ಹೇಗೆ ಪೂರೈಸುವದು ? ನಾನೇ ಪೂಜಾರಿಯಾಗುವೆ! ನೀನೂ ಆಗು! ನಮ್ಮ ಸರ್ವಸ್ವವನ್ನೇ ತ್ಯಾಗದೇವಿಗೆ ಅರ್ಪಿಸಿ ಬಿಡುವಾ " ರಾಮರಾಯ ಅಂತಃಕರುಣ ಉಕ್ಕೇರುವಂತೆ ಹೇಳಿದ.

ಸೀತೆಗೆ ಮೊದಮೊದಲು ರಾಮರಾಯನ ಮಾತಿನ ಅರ್ಥವಾಗಿರಲಿಲ್ಲ. ರಾಮರಾಯನು ಎಲ್ಲವನ್ನೂ ತಿಳಿಸಿಕೊಟ್ಟು ಮಹಾತ್ಮರ ಚರಿತ್ರೆಯ ಮುಖ್ಯ ಮುಖ್ಯ ಭಾಗವನ್ನೆಲ್ಲ ಕನ್ನಡಿಸಿ ಹೇಳಿದ. ಸ್ವಾರ್ಥ ತ್ಯಾಗದ ಮಹಿಮೆಯನ್ನು ಆದೆಷ್ಟೋ ಬಣ್ಣಿಸಿದ. ಅಂದಿನ ದಿನವೆಲ್ಲ ಗಂಡ ಹೆಂಡಿರಿಬ್ಬರೂ ತ್ಯಾಗದೇವಿಯ ಮುಂದೆ ಭೋಗವಿಲಾಸಗಳಲ್ಲಿ ತಾವು ಮಾಡಿದ ಅನ್ಯಾಯಗಳನ್ನೆಲ್ಲ ಒಪ್ಪಿಕೊಂಡು ಅವಳಲ್ಲಿ ಕ್ಷಮೆ ಕೇಳಿಕೊಂಡರು. ಅಂದಿನಿಂದ ಇವರು ತ್ಯಾಗದೇವಿಯ ಅರ್ಚಕರು ; ಒಡಬಗ್ಗರ ಪೋಷಕರು; ರೈತರ ಹಿತಚಿಂತಕರು.

೩

ರೈತರ ಬಡತನದ ಗೋಳಿನ ಬಾಳನ್ನು ಎಷ್ಟು ಹೇಳಿದರೂ ತೀರದು. ಇಡೀ ಭರತಖಂಡದಲ್ಲೆಲ್ಲ ರೈತರು ಉಪವಾಸ ವನವಾಸ ತೊಳಲಾಡುತ್ತಿದ್ದಾರೆ. ಬೆಕ್ಕು ಹಾವುಗಳ ಮಧ್ಯ ಸಿಕ್ಕ ಇಲಿಯಂತಾಗಿದೆ. ಅವರ ಬಾಳು. ಒಂದೆಡೆಗೆ ಸರಕಾರದ ಸುಲಿಗೆ. ಇನ್ನೊಂದೆಡೆಗೆ ಸಾವುಕಾರರ ಲೂಟಿ! ಅಂತೂ ರೈತರ ಸತ್ಯಾನಾಶ! ಬೀರೂರಿನ

ರೈತರ ಸ್ಥಿತಿಯಾದರೂ ಇತ್ತೀಚಿಗೆ ಬಹಳ ಕೆಟ್ಟದ್ದಿತು. ಕರಿಸಾಲಿನ ಮೇಲೆ ಕರಿಸಾಲು. ಸರಕಾರದವರು ತೀರ್ವೆ (ತೆರಿಗೆ) ಬಿಡುವಂತಿಲ್ಲ. ಸಾವುಕಾರರು ತಮ್ಮ ಗಂಟನ್ನು ಒದ್ದು ವಸೂಲ ಮಾಡುವರು. ಒಟ್ಟಿನ ಮೇಲೆ ರೈತರ ಭವಣಿ! ಸಾವುಕಾರರಾದರೂ ಗೇಣೀ ಹಣ (ಲಾವಣಿ) ಕಡಿಮೆ ಮಾಡಿದ್ದರೆ ಅದೆಷ್ಟೋ ಅನುಕೂಲವಾಗುತ್ತಿತ್ತು. ಆದರೆ ಅವರಿಗೆಲ್ಲಿಯ ಕರುಣೆ! ರೈತರಿದ್ದರೇನು! ಸತ್ತರೇನು! ಅವರ ಒಡ ಲೊಂದು ತುಂಬಿದರೆ ಸಾಕು. ಇಷ್ಟೇ ಅವರ ಲೆಕ್ಕ. ಹೀಗಾಗಿ ರೈತರ ಸ್ಥಿತಿಯು ಬಹಳ ಕಂಗಾಲಾಗಿದ್ದಿತು. ರಾಗೀ ಅಂಬಲಿಗೆ ಕೂಡ ಗತಿ ಯಿಲ್ಲದಂತಾಗಿ ಎಷ್ಟೋ ಜನರು ಪ್ರಾಣ ಬಿಡತೊಡಗಿದರು. ಸಾಲ ವನ್ನು ತಂದು ಜೀವನ ನಡೆಸುವವರು ನಡೆಸಿದರು. ಆದರೆ ಎಲ್ಲ ರಿಗೂ ಎಲ್ಲಿಂದ ಸಾಲ ದೊರೆಯಬೇಕು? ಕಾಲವು ಒಳ್ಳೇ ಬಿಕ್ಕಟ್ಟಿನ ದಿತ್ತು. ಈ ಸಂಕಟ ಸಮಯದಲ್ಲಿ ಅನಾಥರಾದ ಒಡ ಒಕ್ಕಲಿಗರಿಗೆ ದಾರೀ ತೋರಿಸಲು ಮುಂದಾಳುಗಳೊಬ್ಬರ ಅವಶ್ಯಕತೆಯಿದ್ದಿತು.

"ದೇವೋ ಅನಾಥ ರಕ್ಷಕಃ" ಎಂಬ ಮಾತು ಹುಸಿಯಲ್ಲ. ದೀನ ಬಂಧುವಾದ ಪರಮೇಶ್ವರನು ಬಡ ರೈತರ ಮೊರೆಯನ್ನು ಕೇಳಿ ದನೋ ಏನೋ ಎಂಬಂತೆ ಇದೇ ಕಾಲಕ್ಕೆ ಸರಿಯಾಗಿ ನಮ್ಮ ರಾಮ ರಾಯನು ತ್ಯಾಗಿಯಾಗಬಯಸಿದುದು.

ರಾಮರಾಯನು ಕಟ್ಟಿಸಿದ ಮಂದಿರವು ಈಗ ಕ್ಲಬ್ಬಲ್ಲ; ತ್ಯಾಗದ ಗುಡಿ. ರಾಮರಾಯನು ಆ ಮಂದಿರದ ತುಂಬ ಕಾಳುಕಡಿಗಳನ್ನು ಒಟ್ಟಿದ್ದಾನೆ ಸೀತೆಯೂ ಅವಳ ಮಕ್ಕಳೂ ರೈತರ ಸೇವೆಗಾಗಿ ರಾಮ ರಾಯನಿಗೆ ನೆರವಾಗುತ್ತಿದ್ದಾರೆ. ಹಸಿವೆ, ಹಸಿವೆ, ಸಂಕಟ, ಸಂಕಟ, ಎಂದು ಗೋಳಾಡುವ ರೈತರ ಒಳದನಿಯ ಕೂಗಾಟವು ಆ ಮಂದಿರದ ಮುಂದೆ ಕೇಳುತ್ತಿದೆ. ರಾಮರಾಯನು ಅವರೆಲ್ಲರಿಗೂ ಅವರವರ ಕುಟುಂಬಕ್ಕೆ ಸಾಕಾಗುವಷ್ಟು ಅಕ್ಕಿ ಬೇಳೆಗಳನ್ನು ಅಳೆದು ಕೊಡುತ್ತಿ ದ್ದಾನೆ. ರೈತರ ಸೇವೆಯಲ್ಲಿ ಮೈಮರೆತು ಎಷ್ಟೋ ಸಲ ಅವನು ಊಟ ವನ್ನು ಕೂಡ ಮಾಡುತ್ತಿರಲಿಲ್ಲ. ಹಗಲಿರುಳು ಅವರ ಸೇವೆಯಲ್ಲಿಯೇ ತತ್ಪರನಾಗುತ್ತಿದ್ದ. ಅವನ ತ್ಯಾಗವೆಂದರೆ ಅಷ್ಟಿಷ್ಟಲ್ಲ. ಹೊಲವನ್ನು

ಮಾರಿದ. ಮನೆಯನ್ನು ಮಾರಿದ. ತನ್ನ ಸರ್ವಸ್ವವನ್ನೂ ಅವ ಹೊಟ್ಟೆಗಾಗಿ ಅರ್ಪಿಸಿದ. ಇಷ್ಟೇ ಹೇಗೆ ಸಾಲಬೇಕು? ಒಂದೆರಡು ಕುಟುಂಬಗಳೇ? ಸಾವಿರಾರು ಅನಾಥ ಕುಟುಂಬಗಳು. ರಾಮರಾಯನಿಗೆ ಅವರ ಸಲುವಾಗಿ ಭಿಕ್ಷೆ ಬೇಡುವ ಪ್ರಸಂಗವಾದರೂ ಬಂದಿತು ಸ್ವತಃ ಜೋಳಿಗೆ ಹಾಕಿಕೊಂಡು ಭಿಕ್ಷೆಯನ್ನು ಬೇಡತೊಡಗಿದ. ಭಿಕ್ಷೆ ಬೇಡುವ ವೇಳೆ ಬಂದಿತೆಂದು ಅವನಿಗೆ ದುಃಖವಿಲ್ಲ. ಅದೊಂದು ಬಗೆಯ ಆನಂದವೇ ಆಗಿದ್ದಿತು. ಆನಂದ! ಪರಮಾನಂದ! 'ನಿಜವಾದ ಸೌಖ್ಯ ನನಗೆ ಈಗ ದೊರೆಯಿತು' ಎಂದು ಹೆಂಡತಿಗೆ ಹೇಳುತ್ತಿದ್ದ. ತನ್ನ ದೇಹವನ್ನು ಒಂದೇ ಸವನೆ ದೀನೋದ್ಧಾರಕ್ಕಾಗಿ ಸವೆಸತೊಡಗಿದ. ಏನಾದರೂ ನೋವು ಉಂಟಾಗಿ ಅಳುವ ಎಳೆ ಮಗುವನ್ನು ಕಕ್ಕುಲತೆಯ ಮಾತೆಯು ಇನಿದಾಗಿ ಜೋಗುಳವಾಡಿ ಮಗುವಿನ ನೋವನ್ನು ಮರೆಯಿಸುವಂತೆ ದೀನ ಬಾಂಧವರಿಗೆ ಅನೇಕ ತರದಿಂದ ಸಹಾಯ ಮಾಡಿ ಅವರಿಗುಂಟಾದ ಬಡತನ ಪಿಶಾಚಿಯ ಬಾಧೆಯನ್ನು ತೊಲಗಿಸುತ್ತಿದ್ದ. ಈರೀತಿ ರಾಮರಾಯನು ತ್ಯಾಗದ ಗುಡಿಯಲ್ಲಿ ಶಾಂತಿಯನ್ನು ಹೊಂದುತ್ತ ದರಿದ್ರನಾರಾಯಣನ ಸೇವೆಯನ್ನು ಭಕ್ತಿಪೂರ್ವಕವಾಗಿ ಮಾಡುತಲಿದ್ದ.

ರೈತರ ಕಷ್ಟನಿವಾರಣೆಗಾಗಿ ರೈತಸಂಘವೊಂದನ್ನು ಸ್ಥಾಪಿಸಿದ. ಸಂಘದ ಪರವಾಗಿ ಸಾಹುಕಾರರೊಡನೆ ಸತ್ಯಾಗ್ರಹವನ್ನು ಹೂಡಬೇಕೆಂದು ವಿಚಾರ ನಡೆಸಿದ್ದ. 'ಬಡವರ ಕಡೆಗಿಷ್ಟು ಕಣ್ದೆರೆದು ನೋಡಿ' ರೆಂದು ಅನೇಕ ಅರ್ಜಿಗಳನ್ನು ಬರೆದು ಸಾಹುಕಾರರಿಗೂ ಸರಕಾರಕ್ಕೂ ಬಿನ್ನವಿಸಿಕೊಂಡ.

ವಿಲಾಸಿಯಾದ ರಾಮರಾಯನ ಮನದ ಮೇಲೆ ತ್ಯಾಗಬುದ್ಧಿಯ ಪ್ರಭಾವವು ಒಮ್ಮೆಲೆ ಹೇಗೆ ಅಂಟಿಕೊಂಡಿತೆಂದು ಪಾಠಕರು ಸೋಜಿಗಗೊಳ್ಳುವದು ಸಹಜವಿದೆ. ಆದರೆ ನಿಜಪರಿಸ್ಥಿತಿ ಹಾಗಿರಲಿಲ್ಲ ರಾಮರಾಯನ ಪೂರ್ವವೃತ್ತಾಂತವು ಹೀಗಿದ್ದಿತು.

ರಾಮರಾಯನ ತಂದೆ ಗೋವಿಂದರಾಯರು ಬೀರೂರಿನ ಸುಖವಸ್ತುಗಳಲ್ಲೊಬ್ಬರು. ಇವರ ಹೆಂಡತಿ ಯಶೋದಾಬಾಯಿ. ಇವರಿಗೆ

ರಾಮರಾಯನೊಬ್ಬನೇ ಒಬ್ಬ ಮಗ. ಒಳ್ಳೇ ಇಚ್ಛೆಯಿಂದ ಬೆಳೆದವ ತಂದೆ ತಾಯಿಗಳಿಬ್ಬರೂ ಇವನ ಯಾವ ಬೇಡಿಕೆಗಳನ್ನು ಅಲ್ಲಗಳೆ ಯುತ್ತಿರಲಿಲ್ಲ. ಇವನು ಬಯಸಿದ ಪದಾರ್ಥಗಳು ಕೂಡಲೆ ಸಿದ್ಧವಾ ಗುತ್ತಿದ್ದವು ರಾಮರಾಯನು ಮಾಧೂ ಎಂಬವನೊಡನೆ ಗೆಳೆತನ ಬೆಳೆಸಿದ್ದ. ಇವರಿಬ್ಬರೂ ಲಂಗೋಟಿಯ ಗೆಳೆಯರು. ಕನ್ನಡ ಶಾಲೆ ಯಲ್ಲಿ ಕೂಡಿದ ಗೆಳೆತನ. ಬಿ. ಎ. ಆಗುವವರೆಗೂ ಹರಿದಿದ್ದಿಲ್ಲ. ಕೂಡಿಯೇ ಆಡುವರು. ಕೂಡಿಯೇ ಓದುವರು. ಬಹುತರವಾಗಿ ಹಗ ಲಿರುಳು ಕೂಡಿಯೇ ಇರುವರು. ಬಿ. ಎ ಆದಮೇಲಾದರೂ ಗೆಳೆಯ ರಲ್ಲಿ ಕಲಹ ಬಂದಿತೆಂದು ತಿಳಿಯಬೇಡಿ. ಮಾಧೂನ ತಂದೆಗೆ ಬೊಂಬಾ ಯಿಗೆ ವರ್ಗವಾದ್ದರಿಂದ ಮಾಧೂ ಅಗಲಿ ಹೋಗಬೇಕಾಯಿತು.

ಮಾಧೂ ಒಳ್ಳೇ ವಿದ್ಯಾವಂತ ಕಮ್ಯುನಿಝಮ್ಮದ ಬಗ್ಗೆ ಅವ ನಿಗೆ ಒಳ್ಳೇ ಆದರ. ಆ ಬಗ್ಗೆ ಅಭ್ಯಾಸ ನಡೆಸಿದ್ದ. ರಾಮರಾಯನೊ ಡನೆ ಈ ವಿಷಯವಾಗಿ ಆಗಾಗ್ಗೆ ಚರ್ಚಿಸುತ್ತಿದ್ದ. ಆದರೆ ರಾಮರಾ ಯನು ಇವುಗಳ ಕಡೆಗೆ ಅಷ್ಟೊಂದು ಲಕ್ಷ ಕೊಡುತ್ತಿದ್ದಿಲ್ಲ. ಆಗ ತಾನೆ ಅವನ ಲಗ್ನ ಬೇರೆ ಆಗಿದ್ದಿತು. ಹೆಂಡತಿಯನ್ನು ಸುಧಾರಕಳನ್ನಾಗಿ ಮಾಡುವ ವಿಷಯವಾಗಿಯೇ ಅವನು ಹಗಲಿರುಳು ಯೋಚಿಸುತ್ತಿದ್ದ.

ಸೀತೆಯಂಥ ಅಶಿಕ್ಷಿತ ಹಳ್ಳಿಯ ಹುಡಿಗೆಯನ್ನು ಮದುವೆಯಾಗ ಬೇಕೆಂದು ರಾಮರಾಯನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ ತಂದೆತಾಯಿ ಗಳ ಒತ್ತಾಯಕ್ಕಾಗಿ ಉಪಾಯಗಾಣದೆ ಮಾಡಿಕೊಳ್ಳಬೇಕಾಯಿತು. ತಂದೆ ತಾಯಿಗಳಿಗ ಬೆದರಿ ನಡೆಯುವದೊಂದು ರಾಮರಾಯನ ಸ್ವಭಾವ ತಂದೆತಾಯಿಗಳನ್ನು ತಪ್ಪಿಸಿ ಸೀತೆಗೆ ಉಪದೇಶಕೊಡಬೇಕೆಂದು ಅವನ ಅಪೇಕ್ಷೆ. ತಾಯಿ ಹೊರಗೆ ಹೋಗುವ ವೇಳೆ ಕಾಯ್ದು ಕೊಂಡೇ ಕೂಡ್ರುತ್ತಿದ್ದ. ಮೊದಮೊದಲು ಸೀತೆ ಗಂಡನೊಡನೆ ಮಾತಾಡಲು ನಾಚುತ್ತಿದ್ದಳು. ರಾಮರಾಯನು ಒಂದೇಸವನೆ ಕೈತೊಳಕೊಂಡು ಬೆನ್ನು ಹತ್ತಿದ ಮೇಲೆ ಮಾತನಾಡತೊಡಗಿದಳು. ಮಾತನಾಡುವದಿಷ್ಟೇ ರಾಮರಾಯನಿಗೆ ಇಷ್ಟವಿರಲಿಲ್ಲ. ಅವಳಿಗೆ ಶಿಕ್ಷಣ ಕೊಡಬೇಕಾಗಿದ್ದಿತು.

ಒಂದು ದಿನ ಮಧ್ಯಾಹ್ನ ೩ ಗಂಟೆಯ ಸಮಯ ತಾಯಿ ಪುರಾಣಕ್ಕೆ ಹೋದುದನ್ನು ತಿಳಿದು ರಾಮರಾಯನು ಒಳಗೆ ಹೋಗಿ, ಮೆಲ್ಲನೆ ಸೀತೆಯನ್ನು ಎಳೆದುಕೊಂಡು ಬಂದು ಅದೆಷ್ಟೋ ಕಾಲ ಅವಳಿಗೆ ಶಿಕ್ಷಣ ಹಾಗೂ ಸುಧಾರಣೆಗಳ ಅವಶ್ಯಕತೆಯ ಬಗ್ಗೆ ಉಪದೇಶ ಕೊಟ್ಟ. ಆದರೆ ಸೀತೆ ಇಳಿಮೋರೆ ಮಾಡಿಕೊಂಡು ಮೂಕಳಂತೆ ಸುಮ್ಮನೆ ಮಿಸುಕದೆ ನಿಂತುಕೊಂಡಿದ್ದಳು ಅವಳನ್ನು ಬಲವಾಗಿ ತನ್ನೆಡೆಗೆ ಎಳೆದುಕೊಂಡು ಮುದ್ದಿಡುತ್ತ "ಸೀತಾ ಹೀಗೆ ನಾಚಿದರೆ ನಮ್ಮ ಬಾಳುವೆ ಹೇಗೆ ಸುಖವಾಗಬೇಕು? ಈ ಕುರೂಪ ವೇಷವೂ, ಮೂಢವಿಚಾರಗಳೂ ನನಗೆ ಸರಿ ಬರುವದಿಲ್ಲ." ರಾಮರಾಯ ಮೃದುವಾಗಿ ನುಡಿದನು

ಪುರಾಣದ ಆಚಾರಿಗೆ ಎಂದೂ ಇಲ್ಲದ ಬೇನೆಯು ಇಂದ್ಯಾಕೆ ಬರಬೇಕೆ? ರಾಮರಾಯನ ತಾಯಿ ಪುರಾಣಕ್ಕೆ ಬಿಡುವಿದ್ದುದರಿಂದ ಯಾವಾಗಲೋ ಮನೆಗೆ ಬಂದು ಬಿಟ್ಟಿದ್ದಳು. ಮಗನ ಜೊತೆ ಮಾತನಾಡುತ್ತ ಕೂಡಬೇಕೆಂದು ಅವನ ಕೋಣೆಯ ಕಡೆಗೆ ಹೋದಳು ಆದರೆ ಈ ದೃಶ್ಯ! ಹೊಸದಾಗಿ ಮನೆಗೆ ಬಂದ ಸೊಸೆಯು ಈ ರೀತಿ ಗಂಡನೊಡನೆ ಸಲುಗೆ ಮಾಡುತ್ತಾಳೆಂದು ತಿಳಿದು ಅವಳಿಗೆ ಬಹಳ ಕೋಪ ಬಂದಿತು. ಸೀತೆಯನ್ನು ಮನಬಂದಂತೆ ಬೈಯುತ್ತ ಒಳಗೆ ಕರೆದುಕೊಂಡು ಹೋದಳು. ಹೆಂಡತಿಯನ್ನು ದುಃಖಕ್ಕೀಡು ಮಾಡಬಾರದೆಂದು ರಾಮರಾಯನಾದರೂ ಅಂದಿನಿಂದ ಸೀತೆಯ ಉಸಾಬರಿಗೆ ಹೋಗಲಿಲ್ಲ.

ಮಗನಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡುವದಕ್ಕಾಗಿಯೋ ಏನೋ ಎನ್ನುವಂತೆ ಗೋವಿಂದರಾಯರೂ ಯಶೋದಾಬಾಯಿಯವರೂ ಮರುವರ್ಷವೇ ಕೈಲಾಸಯಾತ್ರೆಗೆ ಹೊರಟು ಹೋದರು. ತಂದೆ ತಾಯಿಗಳು ಜೀವಿಸಿರುವಾಗಲೇ ಹೆಂಡತಿಯನ್ನು ಸುಧಾರಿಸಲೆತ್ನಿಸಿದ ರಾಮರಾಯನು ಅವರು ಕಣ್ಮರೆಯಾದ ಮೇಲೆ ಎಷ್ಟು ಯತ್ನಿಸಿರಬಹುದೆಂಬುದನ್ನು ವರ್ಣಿಸುವದವಶ್ಯವಿಲ್ಲ ಪಾಶ್ಚಾತ್ಯ ಪದ್ಧತಿಯನ್ನು ಚನ್ನಾಗಿ ಅವಳಿಗೆ ಹೇಳಿಕೊಟ್ಟನು.

ಮಾಧೂ ಬೊಂಬಾಯಿಯಿಂದ ರಾಮರಾಯನಿಗೆ ಆಗಾಗ್ಗೆ ಓಲೆಗಳನ್ನು ಬರೆಯುತ್ತಲಿದ್ದ. ಆದರೆ ಇತ್ತೀಚೆಗಿನ ಓಲೆಗಳ ಬಗೆಯೇ ಬೇರೆಯಾಗಿದ್ದವು. ಸಣ್ಣ ಪುಟ್ಟ ಓಲೆಗಳಲ್ಲ ಚಿಕ್ಕ ಚಿಕ್ಕ ಹೊತ್ತಿಗೆಗಳೇ ಆಗಿದ್ದವು. ಮಾಧೂ ಈಗ ಕಮ್ಯುನಿಝಮ್ಮದ ಬಗ್ಗೆ ತುಂಬಾ ಅಭ್ಯಾಸ ಮಾಡಿದ್ದ. ಮುಂಬಯಿ ಕೂಲಿಕಾರರ ದುಃಸ್ಥಿತಿಯನ್ನು ಕಂಡು ಅವನಿಗೆ ಬಹಳ ಕನಿಕರವೆನಿಸಿದ್ದಿತು. ಕೂಲಿಕಾರರ ಪರವಾಗಿ ಹೋರಾಡಬೇಕೆಂದು ಅವನ ಇಚ್ಛೆ. ಆ ವಿಷಯವಾಗಿಯೇ ರಾಮರಾಯನಿಗೆ ಅವನು ಓಲೆ ಬರೆಯುತ್ತಾ ಇದ್ದುದು ತಪ್ಪದೆ ಆಗಾಗ್ಗೆ ಬರುವ ಈ ಹೃದಯದ್ರಾವಕ ಓಲೆಗಳಿಂದ ಅದರಲ್ಲೂ ಜೀವದ ಗೆಳೆಯನ ಓಲೆಗಳಿಂದ ರಾಮರಾಯನ ಮೇಲೆ ಚೆನ್ನಾಗಿ ಪರಿಣಾಮವಾಗಹತ್ತಿತು ಅಜಾಗ್ರತವಾಗಿರುವಾಗ ಚಾಟಿಯ ಏಟು ಬಿದ್ದ ಕುದುರೆಯಂತೆ ಚಮಕಿತನಾಗಿ ಬಾರಿಬಾರಿಗೂ ಸಾಹುಕಾರರಲ್ಲಿಯೂ, ಬಡವರಲ್ಲಿಯೂ ಇರುವ ವೈಷಮ್ಯವನ್ನು ಕುರಿತು ಯೋಚಿಸತೊಡಗುವನು ಒಂದೆಡೆಗೆ ಒಪ್ಪತ್ತಿನ ಗಂಜಿಗೆ ಗತಿಯಿಲ್ಲದೆ ಅಯ್ಯೋ ಹೊಟ್ಟೆ! ಅಯ್ಯೋ ಹೊಟ್ಟೆ! ಎಂಬ ಎಷ್ಟೋ ಕಂಗಾಲರ ಕೂಗು! ಆದರೆ ಇನ್ನೊಂದೆಡೆಗೆ ನಮ್ಮಂಥ ಸಾಹುಕಾರರು ಕೊಬ್ಬಿದ ಗೂಳಿಯಂತೆ ಮನಬಂದಂತೆ ಹಗಲಿರುಳು ತಿಂದುಂಡು ಅಜೀರ್ಣವಾಗಿ ಬಿಡುವ ಕಮರದೇಗು! ಒಂದೆಡೆಗೆ ಲಂಗೋಟಿಗೆ ಗತಿಯಿಲ್ಲದೆ ಒಳಸೇರಿದ ಹೊಟ್ಟೆಯಲ್ಲಿ ಬಡಕಾದ ಕೈಕಾಲುಗಳನ್ನು ಸೇರಿಸಿಕೊಂಡು ಹಾ ...... ಹಾ........ಹಾ.... ಎನ್ನುತ್ತಿರುವ ಬಡವರ ನಡುಕು! ಇನ್ನೊಂದೆಡೆಗೆ ತರತರದ ಕೋಟು, ಜಾಕೀಟು, ಹ್ಯಾಟು, ಕಾಲಚೀಲ, ನೆಕ್ಟಾಯಿ ಪ್ಯಾಂಟು ಮೊದಲಾದವುಗಳನ್ನು ಬಿಗಿದುಕೊಂಡು ಕಂಡಕಂಡವರ ಮೇಲೆ ಹರ್ ಹುರ್ ಎನ್ನುತ್ತ ಮೆರೆದಾಡುವ ಸಾವುಕಾರರ ಸಿಡುಕು! ಇದೆಲ್ಲ ಸರಿಯೇ? ನಮ್ಮಂಥ ಸಾವುಕಾರರೆಲ್ಲ ದುಂದುಗಾರಿಕೆಯನ್ನು ಬಿಟ್ಟು ಅನಾವಶ್ಯಕವಾದ ವಸ್ತುಗಳನ್ನೆಲ್ಲ ಬಡವರಿಗೆ ಕೊಟ್ಟರೆ ಅವರೂ ಸುಖವಾಗಿ ಬಾಳಬಹುದಲ್ಲವೇ? " ಎಂದು ವಿಚಾರಿಸತೊಡಗುವನು. ಆದರೆ ಮರುಕ್ಷಣದಲ್ಲಿಯೇ ತನ್ನ ವಿಲಾಸವೃತ್ತಿಯಲ್ಲಿ ಅದನ್ನು

ಮರೆತು ಬಿಡುವನು. ಇದೇ ರೀತಿ ನೆನಪಾದಾಗೆಲ್ಲ. ಒಳಗಿಂದೊಳಗೇ ನೊಂದುಕೊಳ್ಳುತ್ತ ರಾಮರಾಯನು ದಿನಗಳೆಯುತ್ತಿದ್ದನು. ಇದೇ ವೇಳೆಗೆ ಅವನ ಕೈಗೆ ಮಹಾತ್ಮರ 'ಆತ್ಮಕತೆ' ದೊರೆತದ್ದು. ಅದನ್ನೊಳ್ಳೆ ಚಿತ್ತಗೊಟ್ಟು ಓದಲಾಗಿ ಅವನನ್ನೊಂದ ಹೃದಯದಲ್ಲಿ ತ್ಯಾಗದ ಮೂರ್ತಿಯು ಅಂಟಿಕೊಂಡಿತು ಆತ್ಯಾಗದ ಮೂರ್ತಿಯನ್ನು ರಾಮರಾಯನು ಯಾವ ರೀತಿ ಮಂದಿರವನ್ನು ಕಟ್ಟಿಸಿ ಅರ್ಚಿಸಿದನೆಂಬುದನ್ನು ವಾಚಕರಿಗೆ ಬಣ್ಣಿಸಿ ಹೇಳುವ ಅವಶ್ಯಕತೆಯಿಲ್ಲ

ಸರಿಯಾಗಿ ಊಟ ನಿದ್ದೆಗಳಿಲ್ಲದೆ ವಿಶ್ರಾಂತಿಯಿಲ್ಲದೆ, ಹಗಲಿರುಳು ಒಂದೇ ಸವನೆ ದುಡಿಯುವ ಮನುಷ್ಯನು ಗಟ್ಟಿಮುಟ್ಟಿಯಾಗಿ ಹೇಗೆ ತಾನೆ ಇರಬಲ್ಲನು ? ರಾಮರಾಯನಿಗೆ ವಿಷಮಜ್ವರದ ಬಾಧೆ ತಟ್ಟಿತು. ಹಾಸಿಗೆ ಹಿಡಿದನು. ಬಹಳ ದುಃಖವಾಯಿತು ಸಾವಿನ ಚಿಂತೆಯಿಂದಲ್ಲ! ಬಡವರ ಗತಿಯೇನಾದೀತೆಂದು ಇನ್ನೂ ಹೊಸ ವರ್ಷದ ಕಾಳು ಕೈಸೇರಿದ್ದಿಲ್ಲ. ಬರುವ ಸುಗ್ಗಿಯ ವರೆಗಾದರೂ ತಾನು ಚೆನ್ನಾಗಿದ್ದರೆ ಸಾಕು ಎನ್ನುತ್ತಿದ್ದ. ತಾನೊಂದು ಬಗೆದರೆ ದೈವವೊಂದು ಬಗೆಯಿತೆನ್ನುವಂತೆ ದೈವೇಚ್ಛೆಯೇ ಬೇರೆಯಾಗಿದ್ದಿತು. ಗಟ್ಟಿಯಾಗಿ ಹಾಸಿಗೆ ಹಿಡಿದು ಬಿಟ್ಟ. ತಾನಿನ್ನು ಬದಕುವದಿಲ್ಲವೆಂದು ಅವನಿಗೆ ಎನಿಸ ತೊಡಗಿತು ಇಷ್ಟಾದರೂ ಅವನು ತನ್ನ ತ್ಯಾಗ ಬುದ್ಧಿಯನ್ನು ಬಿಡಲಿಲ್ಲ ಹೆಂಡತಿ ಮಕ್ಕಳೆಲ್ಲರೂ ಅವನ ಬಳಿಯಲ್ಲಿ ಕುಳಿತು ಆರೈಕೆ ಮಾಡಬಂದರೆ "ನನ್ನ ಆರೈಕೆಗೆ ದೇವರಿದ್ದಾನೆ. ನೀವು ಹೋಗಿ ಉಪವಾಸ ಸಾಯುವ ಬಡರೈತರ ಸೇವೆ ಮಾಡಿದರೆ ಸಾಕು" ಎಂದು ಹೇಳಿ ಕಳಿಸಿ ಕೊಡುತ್ತಿದ್ದ.

ಬೆಳಗಿನ ಜಾವ ಮೂಡಲದಿಕ್ಕಿನಲ್ಲಿ ಸ್ವಲ್ಪ ಬಿಳುಪೇರತೊಡಗಿದ್ದಿತು. ಅಲ್ಲಿ ಅಲ್ಲಿ ಮ್ಲಾನವಾದ ನಕ್ಷತ್ರಗಳು ಮಿನುಗುತ್ತಿದ್ದವು. ಹಕ್ಕಿ ಪಕ್ಕಿಗಳ ಇಂಚರವೂ. ಅಲ್ಲಲ್ಲಿ ಬೀಸುವ ಕಲ್ಲಿನ ಹಾಡಿನ ಸೊಂಪಾದ ಸ್ವರವೂ, ಅರಳುತ್ತಿರುವ ಮಲ್ಲಿಗೆ ಸಂಪಿಗೆ ಮೊದಲಾದ ತರತರದ ಹೂಗಳ ವಾಸನೆಯ ಕಂಪೂ, ಸುಖಕರವಾದ ತಂಗಾಳಿಯ ಸುಳಿವೂ

ಸ್ವಲ್ಪಕಾಲದಲ್ಲಿಯೇ ಮೂಡಲಿರುವ ರವಿರಾಜನ ಸ್ವಾಗತಕ್ಕಾಗಿ ಸಿದ್ಧ ವಾಗಿದ್ದವು ಇನ್ನು ಕ್ಷಣ ಎರಡು ಕ್ಷಣಗಳಲ್ಲಿ ಮೂಡಲು ಅರಳುವದು ಜಗವು ಎಚ್ಚತ್ತು ಪ್ರಕಾಶದಿಂದ ತುಂಬಿ ಬೆಳಗುವದು. ಆದರೆ ರಾಮ ರಾಯನ ಜೀವಜ್ಯೋತಿಯು ಏಕೆ ನಂದಬೇಕು? ತ್ಯಾಗದ ಗುಡಿಯಲ್ಲಿ ಅವನು ಸಂಭ್ರಮದಿಂದ ಕಾಲ ಕಳೆಯುತ್ತಿದ್ದುದು ದೇವರ ಮನಸ್ಸಿಗೆ ಬರಲಿಲ್ಲವೇನೋ? ಅವನೊಬ್ಬನೆ ತ್ಯಾಗದ ಸುಖವನ್ನು ಹೀರಿಕೊಳ್ಳದೆ ಅವನಂತೆಯೇ ಎಲ್ಲ ಸುಶಿಕ್ಷಿತರು ಆ ಮಧುರ ಸುಖವನ್ನು ಅನುಭವಿಸ ಲೆಂದು ಆತನನ್ನು ತನ್ನೆಡೆಗೆ ಕರೆದೊಯ್ಯಲು ಬಂದನೋ? ಪರ ಮೇಶ್ವರನ ಅಗಾಧವಾದ ಲೀಲೆ ತಿಳಿಯದು !

ರಾಮರಾಯನಿಗೆ ತನ್ನ ಬಾಳಿನ ಕೊನೆಯು ಸಮೀಪಿಸಿತೆಂದು ತಿಳಿಯಿತು. ಸಮೀಪದಲ್ಲಿದ್ದ ಎಲ್ಲ ರೈತಬಾಂಧವರನ್ನೂ ಕರೆಸಿ ಕೊಂಡ. "ಅಣ್ಣಗಳಿರಾ, ದೇವರ ಮೇಲೆ ಭಾರವನ್ನು ಹಾಕಿ ಯಾವಾಗಲೂ ಸನ್ಮಾರ್ಗದಿಂದ ನಡೆಯಿರಿ. ಸತ್ಯಕ್ಕಾಗಿ ಸಾಯಲು ಸಿದ್ಧರಾಗಿರಿ. ಭೂಕಂದಾಯವು ಕಡಿಮೆಯಾಗಬೇಕೆಂದು ಸರಕಾರಕ್ಕೆ ಕೈಜೋಡಿಸಿ ಬೇಡಿಕೊಳ್ಳಿರಿ." ಎಂದು ಸೌಮ್ಯಭಾವದಿಂದ ಎಲ್ಲರನ್ನೂ ಕರುಣೆಯಿಂದ ನೋಡುತ್ತ ವಿನಯಪೂರ್ವಕವಾಗಿ ತನ್ನ ಸಂದೇಶವ ನ್ನರುಹುವದಾದ ಬಳಿಕ ತನ್ನ ಹೆಂಡತಿ ಮಕ್ಕಳನ್ನು ಬಳಿಗೆ ಕರೆದ. ತನ್ನ ಬೊಕ್ಕಸದ ಕೀಲೀಕಾಯಿ ಕೊಡುವದಕ್ಕಲ್ಲ! ಅಂತ್ಯಮುಖಾವ ಲೋಕನದ ಆಶೆ ತೀರಿಸಿಕೊಳ್ಳುವದಕ್ಕಲ್ಲ! ಅವರನ್ನು ನೋಡಿ ಕಣ್ಣೀ ರಿಡುವದಕ್ಕಲ್ಲ ! ಯಾವ ಸ್ವಾರ್ಥದ ಸಲುವಾಗಿಯೂ ಅಲ್ಲ. 'ತನ್ನ ಜೀವಜ್ಯೋತಿ ನಂದಿದರೂ ಚಿಂತೆಯಿಲ್ಲ. ತ್ಯಾಗದ ಗುಡಿಯಲ್ಲಿಯ ನಂದಾದೀಪವನ್ನು ಮಾತ್ರ ನಂದಗೊಡಬೇಡಿ' ಎಂದು ಹೇಳಲಿಕ್ಕೆ. ಅಳುವದಕ್ಕೂ, ಕರೆಯುವದಕ್ಕೂ, ಬಹಳಮಾತುಗಳನ್ನು ಬೆಳೆಸುವ ದಕ್ಕೂ ಅವನು ಅವಕಾಶ ಕೊಡಲೇ ಇಲ್ಲ. "ಸೀತಾ, ನನ್ನಂತೆ ಒಡ ಒಕ್ಕಲಿಗರಿಗಾಗಿ ನಿನ್ನ ದೇಹವನ್ನು ಧಾರೆ ಎರೆ. ಮಕ್ಕಳಿರಾ, ಇನ್ನೂ ನೀವೇ ತ್ಯಾಗ ಮಂದಿರದ ಅರ್ಚಕರು" ಎಂದಿಷ್ಟೇ ಹೇಳಿ ರಾಮ ರಾಯನು ತ್ಯಾಗದ ಗುಡಿಯಲ್ಲಿ ಶಾಶ್ವತವಾದ ಸಮಾಧಿಯನ್ನು

ಹೊಂದಿಗ. ಆಯ್ಯೋ, ಇಂಥ ಅಮೌಲ್ಯ ರತ್ನವು ದೊರೆಯುವದು ಬಹಳ ಅಪರೂಪ. ರಾಮರಾಯರಂತೆಯೇ ಪ್ರತಿಯೊಬ್ಬರೂ ತ್ಯಾಗ ದೇವತೆಯ ಸೇವಕರಾಗಲೆತ್ನಿಸಿವರೆ ಈ ಚಿಕ್ಕ ಕತೆಯನ್ನು ಓದಿದ್ದರ ಸಾರ್ಥಕವಾಗುವದೆಂದೂ, ಅವರಿಂದ ಭಾರತದ ಅಲ್ಪ ಸ್ವಲ್ಪವಾದರೂ ಉದ್ಧಾರವಾದೀತೆಂದೂ ಲೇಖಕನು ನಂಬಿದ್ದಾನೆ.



—ಃ ಓಂ. ಶಾಂತಿಃ ಶಾಂತಿಃ ಶಾಂತಿಃ :—

# ನಾನೇ ಹೊಲೆಯ



ಒಂದು ಚಿಕ್ಕ ಹಳ್ಳಿ. ಚಿಕ್ಕದಾದರೂ ನಾಲ್ಕೈದು ನೂರು ಮನೆಗಳಿಗೆ ಕಡಿಮೆ ಇಲ್ಲ ನೂರರಷ್ಟು ಹಾರುವರ ಮನೆಗಳೂ ಇವೆ ; ಅದರಲ್ಲಿಯೂ ಆಚಾರ್ಯರ ಮನೆಗಳೇ ಹೆಚ್ಚು. ಅಣ್ಣಾಚಾರ್ಯರು ತಮ್ಮ ಬಾಯಿ ಬುಡುಬುಡುಕೆಯಿಂದಲೊ, ಒಪ್ಪುವಂಥ ತಮ್ಮ ದಿವ್ಯವಾದ ಆಚಾರ್ಯ ವೇಷಭೂಷಣದಿಂದಲೋ, "ಸನಾತನ ಧರ್ಮೋದ್ಧಾರ" ವೆಂಬ ದೊಡ್ಡ ಹೆಸರಿನದೊಂದು ಸಮಿತಿಯ ಕಾರ್ಯದರ್ಶಿಯಾಗಿದ್ದರು. ಅವರು ಓದಿದ್ದು ಕನ್ನಡ ನಾಲ್ಕನೆಯ ಇಯತ್ತೆಯವರೆಗೆ. ಸನಾತನ ಧರ್ಮರಕ್ಷಕರ ವೈದಿಕ ಲಕ್ಷಣಗಳಾಗಿದ್ದ ಸಂಧ್ಯಾವಂದನೆ, ಪೂಜಾ ಪುರಸ್ಕಾರ, ಶ್ರಾದ್ಧ ಸಂಕಲ್ಪಗಳನ್ನು ಸಾಗಿಸುವ ಮಟ್ಟಿಗೆ ಮಂತ್ರಗಳನ್ನೂ ಕಲಿತದ್ದಲ್ಲದೆ ಅಮರಕೋಶ, ವಾಯುಸ್ತುತಿ ಮೊದಲಾದ ಸಂಸ್ಕೃತ ಶ್ಲೋಕಗಳನ್ನಾದರೂ ಬಾಯಿಪಾಠ ಮಾಡಿದ್ದರು. ಇದಿಷ್ಟು ಅವರ ಜ್ಞಾನಭಂಡಾರ ! ಅವರಿಗೆ ಆಸ್ತಿಪಾಸ್ತಿಗಳಾವದೂ ಏನೂ ಇರಲಿಲ್ಲ ಗುಂಡೂರಾಯರ ಮನೆಯಲ್ಲಿ ಗಂಟೆ ಬಾರಿಸುತ್ತಿದ್ದರು· ಮಧ್ಯಾಹ್ನದೂಟ ಅಲ್ಲಿಯೇ ಆಗುತ್ತಿದ್ದಿತು· ಅಲ್ಪಸ್ವಲ್ಪ ಪೌರೋಹಿತ್ಯದ ಕೆಲಸದಿಂದ ಆಗಾಗ್ಗೆ ದಾನ-ದಕ್ಷಿಣೆಗಳು ದೊರೆಯುತ್ತಿದ್ದವು. ಇದಲ್ಲದೆ ಪ್ರಾಣದೇವರ ಗುಡಿಯಲ್ಲಿ ಅಂಕುಡೊಂಕು ಪುರಾಣವನ್ನು ಹೇಳಿ ದಿನಾಲು ಅರ್ಧ ಸೇರು ಅಕ್ಕಿಯನ್ನು ಸಂಪಾದಿಸುತ್ತಿದ್ದರು ಈ ಎಲ್ಲ ಸಂಪಾದನೆಯಿಂದಲೇ ಅವರ ಸಂಸಾರ ಸಾಗಬೇಕು ಅಣ್ಣಾಚಾರ್ಯರ ವಯಸ್ಸಾದರೂ ಬಹಳಿರಲಿಲ್ಲ. ಮೂವತ್ತು ಮಿಕ್ಕಿರಬಹುದು. ನಡು ಹರೆ ; ತುಂಬಿದ ದುಂಡು ದುಂಡು ಮೈಕಟ್ಟಿನ ಗಟ್ಟಿಯಾಳು. ಅವರಿಗೆ ಮಕ್ಕಳಿನ್ನೂ ಹುಟ್ಟಿರಲ್ಲಿಲ್ಲ. ಗಂಡಹೆಂಡಿರಿಬ್ಬರೇ ಮನೆಯಲ್ಲಿ. ಸಾಕಿನ್ನು ಅಣ್ಣಾಚಾರ್ಯರ ಸ್ಥಿತಿಗತಿ ಇನ್ನು ನಡೆವಳಿಯನ್ನಷ್ಟು ಗಮನಿಸುವಾ. ಅವರು ಬಹಳ

ಡಾಂಭಿಕರು. ಮೇಲೆ ಬಕಪ್ಪ ಒಳಗೆ ವಿಷಪ್ಪ ಎಂಬಂತೆ ಅವರ ನಡತೆ ಬಹಳ ಕಾಮುಕ ಸ್ವಭಾವ! ವ್ಯಭಿಚಾರಿ! ದುರಾಚಾರಿ! ಅನಾಚಾರಿ! ಢೋಂಗು ಮಾತ್ರ ಅವರಿಗೆ ಚನ್ನಾಗಿ ಸಾಧಿಸಿದ್ದಿತು. ಮೇಲೆ ಮೇಲೆ ತನ್ನಂಥ ಪವಿತ್ರರು ಯಾರೂ ಇಲ್ಲನೆಂದು ತೋರಿಸುವದಕ್ಕಾಗಿ "ರಾಮ–ರಾಮ ಕೃಷ್ಣ–ಕೃಷ್ಣ–ಹರಿ–ಹರಿ" ಎಂದು ದೊಡ್ಡದಾಗಿ ಒದರುತ್ತ ನದಿಯಿಂದ ಬರುವಾಗ್ಗೆ ನಮ್ಮ ಅಣ್ಣಾಚಾರ್ಯರನ್ನು ನೋಡಬೇಕು ಅಹಹಾ! ಎಷ್ಟು ಮಡಿವಂತರು! ದಾರಿಯುದ್ದಕ್ಕೂ ನೂಲುನುಸಿ, ಕಡ್ಡಿ ಕಸಗಳ ಮೇಲೆ ನೀರು ಸಿಂಪಡಿಸುತ್ತ ಮೈತುಂಬ ಗೋಪಿಚಂದನ ಮುದ್ರೆಗಳಿಂದಲಂಕೃತರಾಗಿ ಬರುವ ಆಚಾರ್ಯರು ಅಲಾಬೀ ಹಬ್ಬದಲ್ಲಿ ಕುಣಿಯುತ್ತ ಬರುವ ಹುಲಿಯಾಗಿಯೇ ತೋರುತ್ತಿದ್ದರು. ಅಂಗಾರವೇನು? ಭಕ್ತಶ್ರೇಷ್ಠ! ಪಾಪ! ದೇವರು ಇವರ ಉಜ್ವಲವಾದ ಭಕ್ತಿಗೆ ಮೆಚ್ಚಿ ಓಡಿಬರಬಾರದೇ? ಇಷ್ಟು ಶುಚಿರ್ಭೂತ ವೇಷದಿಂದ ಅವರು ಗುಂಡೂರಾಯರ ಮನೆಗೆ ಪೂಜೆಗೆ ಹೋಗುತ್ತಿದ್ದರು. ದಾರಿಗುಂಟ ಬರುವಾಗ್ಗೆ ಅವರು ಬಾಯಿಂದ ಜಪಿಸುತ್ತಿದ್ದುದು ರಾಮ ರಾಮಯೆಂದು. ಆದರೆ ಅವರ ಮನದೊಳಗಿನ ಮಾತುಗಳನ್ನು ಅರಿಯುವವರಾರು? ರಮಾ ರಮಾ ಎಂದಿರಲಿಕ್ಕಿಲ್ಲವಷ್ಟೇ?

೨

ಗುಂಡೂರಾಯರು ಆ ಊರ ಗೃಹಸ್ಥರಲ್ಲೊಬ್ಬರು. ವೈಷ್ಣವ ಮತದವರು. ಅವರಿಗೀಗ ಮುಪ್ಪಿನ ಕಾಲ. ಮನೆಯಲ್ಲಿ ಹೆಂಡತಿಯೊಬ್ಬಳು, ಕಿರಿಮಗಳಾದ ರಮೆಯೊಬ್ಬಳು. ಅವರು ತಮಗೆ ಗಂಡು ಮಕ್ಕಳು ಹುಟ್ಟದೆ ಇದ್ದುದರಿಂದ ಬಹಳೇ ಬೇಜಾರಪಡುತ್ತಿದ್ದರು. ಆಗಾಗ್ಗೆ ಅಯ್ಯೋ ದೈವವೇ ಎಂದು ಕಣ್ಣೀರಿಡುತ್ತಿದ್ದರು. ಹುಟ್ಟಿದವರು ನಾಲ್ಕು ಜನ; ಎಲ್ಲರೂ ಹೆಣ್ಣು ಮಕ್ಕಳೇ "ಮನೆಯನ್ನು ತೊಳೆಯಲಿಕ್ಕೆ ಎಲ್ಲವೂ ಹೆಣ್ಣೇ ಹುಟ್ಟಿದವಲ್ಲ ಎಂದು ಮರ ಮರ ಮರುಗುವರು. ಮೂವರ ಲಗ್ನವಾಗಿ ಹುಡುಗೆಯರು ಅತ್ತೆಯ ಮನೆಗೆ ಹೋಗಿದ್ದರು. ಪ್ರಾಯಕ್ಕೆ ಬಂದಿದ್ದರೂ ಕಿರಿಮಗಳಾದ ರಮೆಯ ಲಗ್ನವು ಮಾತ್ರ ಇನ್ನೂ ಆಗಿರಲಿಲ್ಲ. ಗುಂಡೂರಾಯರು ಲಗ್ನದ

ಯೋಚನೆಯನ್ನು ಮಾಡಿರಲೇ ಇಲ್ಲವೆಂದಲ್ಲ. ಡಾ. ಶ್ರೀನಿವಾಸರಾಯ ರಿಗೆ ಕೊಡುವದೆಂದು ನಿಶ್ಚಯವಾಗಿದ್ದಿತು. ಎರಡೂ ಬದಿಯವರು ಲಗ್ನದ ಸಿದ್ಧತೆಯನ್ನಾದರೂ ನಡೆಸಿದ್ದರು. ಆದರೆ ಅಷ್ಟರಲ್ಲಿಯೇ ನಮ್ಮ ಕುಟಿಲ ನೀತಿಯ ಅಣ್ಣಾಚಾರ್ಯರು ಲಗ್ನದ ಮಧ್ಯ ವಿಘ್ನ ತಂದೊಡ್ಡಿದರು. "ಡಾ ಶ್ರೀನಿವಾಸರಾಯರು ಸುಧಾರಕರಿದ್ದಾರೆ. ಧರ್ಮಭ್ರಷ್ಟರಿದ್ದಾರೆ ಅಸ್ಪೃಶ್ಯರಂಥ ಕೀಳು ಜನರು ದೇವಾ ಲಯದಲ್ಲ ಪ್ರವೇಶಿಸಬೇಕೆನ್ನುತ್ತಾರೆ. ಅಂಥವರಿಗೆ ಮಗಳನ್ನು ಕೊಡು ವದು ಉಚಿತವಲ್ಲ. ನಾಳೆ ನಿಮ್ಮ ಮಗಳೂ ಅಸ್ಪೃಶ್ಯಳಾದಾಳು. ಸ್ವಾಮಿಗಳು ಆಮೇಲೆ ನಿಮಗೆ ಬಹಿಷ್ಕಾರ ಹಾಕಿಯಾರು, ಎಚ್ಚರಿಕೆ!" ಎಂದು ಪಂತಾಗಿ ಹೇಳಿ ಆ ಮದಿವೆಯನ್ನು ಮುರಿದರು ಅಣ್ಣಾ ಚಾರ್ಯರ ಮೇಲೆ ಗುಂಡೂರಾಯರದು ಬಹಳ ಶ್ರದ್ಧೆ. ಅದು ಕಾರಣ ಅವರು ಅವರ ಸೂಚನೆಗೆ ಒಪ್ಪಿದರು ಒಟ್ಟಿನ ಮೇಲೆ ರಮೆಯ ದುರ್ಭಾಗ್ಯ! ಇನ್ನೂ ಮದಿವೆಯಿಲ್ಲ. ಮೈನೆರೆದಿದ್ದಾಳೆ ಬೈಲಿಗೆ ಳೆದರ ಆಚಾರ್ಯರಲ್ಲಿ ವರವು ಸಿಕ್ಕುವದೆಂತು! ಮುಚ್ಚಿಕೊಂಡೇ ಇದ್ದಾರೆ. ರಮೆಯು ಮಾತ್ರ ತನ್ನ ಲಗ್ನವು ನಿಂತೇ ಹೋಯಿತಲ್ಲ. ಎಂದು ಚಿಂತೆಯಿಂದ ಸಣ್ಣಾಗತೊಡಗಿದ್ದಳು.

ಸಾದುಗಪ್ಪು ಬಣ್ಣದವಳಾದರೂ ರಮೆಯು ಒಳ್ಳೇ ಚಲುವೆ ಯಾದ ಹುಡಿಗಿ. ಸಾದಾ ಉಡುಪು ತೊಡಪು. ಅರಳಿದ ನಗೆಮಲ್ಲಿಗೆ ಕಳಕಳಿಸುವಂತಹ ಅವಳ ವಿಶಾಲವಾದ ಮುಖದಲ್ಲಿ ಕುರುಹಿನ ಮಟ್ಟಿಗೂ ಕಾಪಟ್ಯವಿರಲಿಲ್ಲ. ಬಿಂಕ ಒಯ್ಯಾರದ ಸೊಂಕನ್ನು ಕೂಡ ಕೇಳಬೇಡಿ· ಒಳ್ಳೇ ನಡತೆಯುಳ್ಳವಳು. ಕನ್ನಡ ಎರಡು ಪುಸ್ತಕಗಳನ್ನೆ ಓದಿದ್ದರೂ ಮನೆಯಲ್ಲಿ ಚಿಕ್ಕಪುಟ್ಟ ಪುಸ್ತಕ ಓದಿ ಮುಲಕೀ ಪರೀ ಕ್ಷೆಯ ವಿದ್ಯಾರ್ಥಿಗಳನ್ನು ಮೀರುವಷ್ಟು ಜ್ಞಾನ ಪಡೆದಿದ್ದಳು. ಅದು ಕಾರಣ ಅವಳಿಗೆ ಸುಶಿಕ್ಷಿತಳೆನ್ನುವದಕ್ಕೆ ಏನೂ ಅಡ್ಡಿಯಿಲ್ಲ. ಅವಳಲ್ಲಿ ಯಾವಾಗಲೂ ಉಚ್ಚಭಾವನೆಗಳು ಮೊಳೆದೋರುತ್ತಿದ್ದವು. ಪರ ಪುರುಷರನ್ನು ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಆದರೆ ಕಾಮಾಂಧ ರಾದ ಅಣ್ಣಾಚಾರ್ಯರೊಬ್ಬರು ತೊಂದರೆ ಕೊಡುವದಕ್ಕಾಗಿ ಅವಳ

ಹಿಂದೆ ಕೈ ತೊಳೆದುಕೊಂಡು ಬೆನ್ನು ಹತ್ತಿದ್ದರು. ಆ ಮಡಿವಂತ ಆಚಾರ್ಯರ ದುರಾಚರಣೆಯು ಸರ್ವಸಾಕ್ಷಿಯಾದ ಪರಮೇಶ್ವರನಿಗೆ ಗೊತ್ತು. ನಮ್ಮ ಸುಹೃದಯಳಾದ ರಮೆಗೊಂದು ಗೊತ್ತು. ಉಳಿದ ವರು ಅವರು ಕಪಟವನ್ನೇನು ಬಲ್ಲರು? ಗುಂಡೂರಾಯರಂತೂ ಮನೆ ಯಲ್ಲಿ ಇರುವದೇ ಕಡಿಮೆ. ಕಿವುಡ ಹೆಂಡತಿಯೊಬ್ಬಳೇ ಇರುತ್ತಿದ್ದಳು ಆಚಾರ್ಯರ ಮೇಲೆ ಅವಳದಾದರೂ ಬಹಳ ಭಕ್ತಿ ಕೇಳುವದೇನು ? ಜಾಲದಲ್ಲಿ ಸಿಲುಕಿಸಿಕೊಳ್ಳಬೇಕೆಂದು ಅವರ ಸಾಹಸ ತಾಯಿಯು ಅಶಕ್ತಳಾದ ಮೂಲಕ ರಮೆಯು ಯಾವಾಗಲೂ ಅಡಿಗೆಯ ಮನೆ ಯಲ್ಲಿ ಅವಳ ನೆರವಿಗಾಗಿ ಇರುತ್ತಿದ್ದುದೂ ಆಚಾರ್ಯರಿಗೆ ಬಹಳ ಅನುಕೂಲವಾಗಿದ್ದಿತು. ದೇವರ ಪೂಜೆಗೆಂದು ಬಂದ ಪುಣ್ಯಾತ್ಮರು ಯಾವಾಗಲೂ ರಮೆಯನ್ನೇ ಕಳ್ಳಗಣ್ಣಿನಿಂದ ನೋಡುವರು. ಅವ ಳೊಡನೆ ಮನ ಬಂದಂತೆ ಹಾಸ್ಯವಾಡುವರು. ಅಯ್ಯೋ! ರಮೆಯ ದುರ್ದೈವವೇ! ಕಿವುಡ ತಾಯಿ. ಅವನ ಹಾಸ್ಯ ತಡೆಯುವವರಾರು ? ಬರಬರುತ್ತ ಅಣ್ಣಾಚಾರ್ಯರು ಬಹಳ ಹೀನವಾದ ಶಬ್ದಗಳನ್ನಾಡ ಹತ್ತಿದರು. ಪೂಜೆಯ ಹೊತ್ತಿನ ಮುಟ್ಟಿಗಾದರೂ ಒಳಗೆ ಬರಬಾರ ದೆಂದು ರಮೆಯು ಹೊರಗೇ ಇರುತ್ತಿದ್ದರೆ ಅಲ್ಲಿಯೂ ಆ ಶನಿಯು ಬಿಡು ತ್ತಿರಲಿಲ್ಲ. ಹೊರಗೇ ಬಂದು " ದೀಪಕ್ಕೆ ಎಣ್ಣೆಯಿಲ್ಲ ನಡೆ " ಎನ್ನು ವರು. ' ಹೂವಿನ ತಟ್ಟೆಯಲ್ಲಿ ನೂಲಿದ್ದಂತೆ ಕಾಣುತ್ತದೆ ಬಾ ಎನ್ನು ವರು. ಹೀಗಾಗಿ ಅವರ ಉಪಟಳವು ಸೀಮೆ ಮೀರಿದ್ದಿತು ಹೊರಗೆ ಬಂದಾಗ ಕಾಮವಿಕಾರದಲ್ಲಿ ಒಂದೆರಡು ಸಲ ಅವಳ ಮೈಮುಟ್ಟಿ ನಡೆಯೆಂದು ಸಹ ನುಡಿದರು. ಅಹಹಾ ! ಬಹು ಮಡಿವಂತರು ನಮ್ಮ ಆಚಾರ್ಯರು! " ಅಸ್ಪೃಶ್ಯರಿಗೆ ಅಪವಿತ್ರ ಎನ್ನುವಿಯಲ್ಲೋ ಹೊಲಿ ಯಾಚಾರೀ! ಈಗ ಯಾರು ಹೊಲೆಯರು ? ನಾಚಿಕೆಯಾಗುವದಿಲ್ಲವೇ ಪರಸ್ತ್ರೀಯರ ಮೇಲೆ ಕೈ ಹಾಕಲಿಕ್ಕೆ ? ನಿಮ್ಮಂಥ ಡಾಂಭಿಕ ಆಚಾರಿ ಗಳಿದ್ದರೆ ತೀರಿತು ? ಸನಾತನ ಧರ್ಮವು ಚನ್ನಾಗಿ ಉದ್ಧಾರವಾಗು ತ್ತದೆ. ' ಎಂದು ಚನ್ನಾಗಿ ಮನಸ್ಸಿಗೆ ನಡುವಂತೆ ಮಾತನಾಡುತಿ

ದ್ದಳು ರಮೆ. ಆದರೆ ಅಧರ್ಮರಿಗೆಲ್ಲಿ ಇದು ನೋವೆನಿಸಬೇಕು? ಆಚಾರ್ಯರು ತಮ್ಮ ಪುಂಡಾಟಿಕೆ ಬಿಡುತ್ತಲೇ ಇರಲಿಲ್ಲ.

೩

ಆಷಾಢಮಾಸ, ಇಂದು ಮೊದಲನೇ ಏಕಾದಶಿ. ಈ ಏಕಾದಶಿ ಎಂದರೆ ಹಿಂದುಗಳಿಗೆ ಪವಿತ್ರವಾದ ದಿನ. ಎಲ್ಲೆಡೆಯಲ್ಲಿಯೂ ಇಂದು ಉಪವಾಸ ವ್ರತ. ಹಳ್ಳ ಕೆರೆ ನದಿ ನಾಲಗಳಿದ್ದ ಊರವರು ಸ್ನಾನಕ್ಕಾಗಿ ಇಂದು ಅಲ್ಲಿಗೇ ಹೋಗುವದು ಎಲ್ಲರ ವಾಡಿಕೆ. ಜ್ವರ ಬಿಟ್ಟು ಎರಡು ಮೂರು ದಿನಗಳು ಆಗಿದ್ದರಿಂದ ರಮೆಯು ಇಂದು ನದಿಗೆ ಮೈ ತೊಳೆಯಲು ಹೋಗಿರಲಿಲ್ಲ. ತಾಯಿ ಮಾತ್ರ ಹೋಗಿದ್ದಳು. ಇದೇ ಹೊತ್ತೆಂಪರು ಆಚಾರ್ಯರು. ಲಂಡಪಂಜಿಯನ್ನುಟ್ಟುಕೊಂಡು ಸವಟನಿಂದ ಥಾಲಿಯನ್ನು ಕಟಗುಡಿಸುತ್ತ ಪೂಜೆಯ ನಿಮಿತ್ತವಾಗಿ ಬಂದರು. ರಮೆಯು ದ್ವಾದಸಿಯ ಜೋಡಣೆಗೋಸ್ಕರ ಅಡಿಗೆಯ ಮನೆಯಲ್ಲಿ ಹಿಟ್ಟು ಸಾಣಿಸುತ್ತ ಕುಳಿತಿದ್ದಳು. ಬೇಟಿಗಾರನು ಮೊಲವನ್ನು ಕಂಡೊಡನೆ ಹಿಗ್ಗುವಂತೆ ಅವಳೊಬ್ಬಳೇ ಮನೆಯಲ್ಲಿದ್ದುದನ್ನು ಕಂಡು ಆಚಾರ್ಯರು ಬಲು ಹಿಗ್ಗಿದರು. ದೇವರ ಮುಂದೆ ಹೋಗಿ ಕುಳಿತರೇನೋ ಆದರೆ ಲಕ್ಷವೆಲ್ಲ ರಮೆಯ ಕಡೆಗೆ ಹಾಗೂ ಹೀಗೂ ಗಂಧವನ್ನೊಂದು ತೆಯ್ದಿಟ್ಟರು. ಮನಸ್ಸು ನಿಲ್ಲದಾಯಿತು. ಇನ್ನು ಅವರಿಗೆ ಅಲ್ಲಿ ಕೂಡುವದು ಸಾಧ್ಯವಾಗಲಿಲ್ಲ. ನಿಶೆಯಲ್ಲಿದ್ದ ಶೆರೆಗುಡುಕರು ಬಡಬಡಿಸುವಂತೆ ಅವಳೊಡನೆ ಕೀಳು ತರದ ಮಾತುಗಳನ್ನಾಡಹತ್ತಿದರು ಆವಳಿಗೆ ಅವು ಸರಿಬಾರದ್ದರಿಂದ ಹೊರಗೆ ಹೊರಡಲನುವಾದಳು. ಅದರೆ ಮದೋನ್ಮತ್ತ ಆಚಾರ್ಯರು ಚಟ್ಟನೆ ಎದ್ದು ಹೋಗಿ ಅವಳನ್ನು ಅಡ್ಡಗಟ್ಟಿದರು. ಅವಳು ದೂರ ಸರಿದು ನಿಂತಳು. ಅವಳ ಮನವಲಿಸುವದಕ್ಕಾಗಿ ಆಚಾರ್ಯರು ಬಹಳ ಪ್ರಯತ್ನ ಪಟ್ಟರು.

"ಥೂ ಚಾಂಡಾಲಾ! ನಿನ್ನಂತೆ ನನ್ನನ್ನೂ ಅನಾಚಾರಿಣಿಯನ್ನಾಗಿ ಮಾಡಬೇಕೆನ್ನುವಿಯಾ? ದೊಡ್ಡ ಏಕಾದಶಿ! ಇಂದಾದರೂ

ನಿನ್ನ ವಿಚಾರಗಳು ಪವಿತ್ರವಾಗಿರಬಾರವೇ ? ಇಂಥ ನೀಚ ಕೃತ್ಯಕ್ಕೆ ನರಕವಾಸವೆಂಬುದು ನಿನಗೆ ಗೊತ್ತಿಲ್ಲವ್ರೋ? ದೊಡ್ಡ ದೊಡ್ಡ ಪುರಾಣ ಹೇಳುವಿಯಲ್ಲೋ ಮಂಗ" ಈ ರೀತಿ ರಮೆಯು ಅವನಿಗೆ ಛೀ ಥೂ ಹಾಕತೊಡಗಿದಳು. ನಾಚಿಕೆಯೆಂಬ ಮೂರಕ್ಷರವನ್ನು ಬಿಟ್ಟ ಪುಂಡರಿಗೆಲ್ಲಿಯ ಛೀ ಥೂ ನಾಟಬೇಕು? ಛೀ ಎಂದರೆ ನನಗೆ ಬಾ ಎಂದಂತಾಗುವದು ಎಂದು ನುಡಿದು ಪುನ. ಅವರು ಅವಳ ಮೇಲೆ ಏರಿ ಹೋದರು. ಅವಳು ಮತ್ತಿಷ್ಟು ಹಿಂದೆ ಸರಿದಳು ಆಚಾರ್ಯರು ಮುಂದೆ ಸಾಗಿ ಅವಳ ಎರಡೂ ಕೈಗಳನ್ನು ಬಲವಾಗಿ ಹಿಡಿದರು. ಅವಳು ಚೀರಲುದ್ಯುಕ್ತಳಾದುದನ್ನು ಕಂಡು ಅವಳ ಬಾಯನ್ನು ಬಿಗಿದು ಹಿಡಿದರು. ಇನ್ನು ಆಚಾರ್ಯರು ಅವಳ ಮೇಲೆ ಬಲಾತ್ಕಾರ ಮಾಡತಕ್ಕವರು ಆದರೆ ಬಾಗಿಲ ಹತ್ತಿರ ಯಾರದೋ ಕಾಲುಸದ್ದು ಕೇಳಿಸಿತು. ಹಿಂದಿರುಗಿ ನೋಡುತ್ತಾರೆ ಗುಂಡೂರಾಯರು. ಆಚಾರ್ಯರ ಎದೆ ದಡ ದಡ ಎನ್ನಹತ್ತಿತು. ಕಣ್ಣು ಮುಂದೆ ಕತ್ತಲು ಕವಿದಂತಾಯ್ತು. ಮುಗಿಲು ಕಡಿದುಕೊಂಡು ಬಿದ್ದಂತಾಯ್ತು. ಅದರೂ ಇಂಥ ನೀಚ ಕೃತ್ಯದಲ್ಲಿ ನುರಿತವರಾದ ಆಚಾರ್ಯರು ಬೆದರಲಿಲ್ಲ. ರಮೆಯನ್ನೇ ಅಪರಾಧಿಯನ್ನಾಗಿ ಮಾಡಲಿಕ್ಕೆ ಹವಣಿಸಿದರು. "ಥೂ ಪಾಪಿಣಿ! ರಕ್ಕಸಿಯಬಲ! ನನ್ನನ್ನು ನೀಚ ಕೃತ್ಯಕ್ಕೆ ತೊಡಗಿಸಬೇಕೆನ್ನುವಿಯಾ ? ಗಂಡರಾಮಿ ! ಎಲ್ಲಿಯಾದರೂ ನಿಮ್ಮಪ್ಪನ ಮಾನ ಕಳೆದಿಟ್ಟೀ" ಎಂದು ಅಬ್ಬರಿಸುತ್ತ ಅವಳಿಂದ ತಮ್ಮ ಕೈಯನ್ನು ಬಿಡಿಸಿಕೊಳ್ಳುವಂತೆ ನಟಿಸಿ ದೂರ ಸರಿದು ನಿಂತರು. ಸಭ್ಯಳಾದ ರಮೆಯು ಇನ್ನೇನು ಮಾಡುವಳು ? ಅವಳ ಮೊರೆಯನ್ನಾರು ಕೇಳುವರು ? ಗುಂಡೂರಾಯರು ಒಳಕ್ಕ ಒಂದರು. ಹೊಲದಿಂದ ಬಿಸಲಲ್ಲಿ ಈಗ ತಾನೆ ಬಂದುದರಿಂದ ಗುಂಡೂರಾಯರಿಗೆ ಯಾರು ಯಾರ ಕೈ ಹಿಡಿದಿದ್ದರೋ ಅದೆಲ್ಲ ತಿಳಿಯಲಿಲ್ಲ. ಆಚಾರಿಯ ಘಂಟಾಘೋಷದಂಥ ಮಾತುಗಳು ಮಾತ್ರ ಕೇಳಿಸಿದವು. ಕೆಂಡದಂತೆ ಕಿಡಿ ಕಿಡಿಯಾದರು. ಸತ್ಯಾಸತ್ಯಗಳ ವಿಚಾರಣೆಯನ್ನು ಕೂಡ ಮಾಡಲಿಲ್ಲ. ತಮ್ಮ ಮಗಳೇ ದುರಾಚಾರಿಯೆಂದು ತಿಳದುಕೊಂಡರು. ಒಳಕ್ಕೆ

ಬಂದವರೇ ತಮ್ಮ ಕೈಗೋಲಿನಿಂದ ರಮೆಯನ್ನು ಒಳಿತಾಗಿ ಥಳಿಸಿದರು. ರಮೆಯು ರೋದಿಸತೊಡಗಿದಳು. ತಾನು ನಿರಪರಾಧಿಯೆಂದು ಪರಿಪರಿಯಾಗಿ ಹೇಳಿಕೊಂಡಳು. ಎಲ್ಲವೂ ವ್ಯರ್ಥ; ಬೋರ್ಗಲ್ಲ ಮೇಲೆ ನೀರು ಸುರಿವಿದಂತೆಯೇ. ಗುಂಡೂರಾಯರ ಗರ್ಜನೆಯೊಂದಿಗೆ ಆಚಾರ್ಯರು ಧ್ವನಿಗೂಡಿಸಹತ್ತಿದರು. ತೀರಿತು ಒಂದಕ್ಕೆ ಎರಡ. ಗುಂಡೂರಾಯರು ಬಲವಾಗಿ ಮಗಳನ್ನು ಬಾಗಿಲ ಹೊರಕ್ಕೆ ತಳ್ಳಿದರು. "ಹೋಗು, ಹಾದರಗಿತ್ತಿ, ಮುಂದೆ ನಮ್ಮ ಮನೆಯಲ್ಲಿ ಇನ್ನು ಕಾಲ ಸಹ ಇಕ್ಕಬೇಡ. ಮಾರಿ! ಮನೆಯ ಮಾರಿ! ಕುಲಘಾತಕಿ! ನನ್ನನ್ನು ಸರ್ವಸ್ವಿಯಾಗಿ ಹಾಳುಮಾಡಿದೆ ನಿನ್ನ ನೀಚತನವನ್ನು ಕಣ್ಣಾರೆ ಕಂಡೆ ಹುಚ್ಚಭೋಸಡಿ" ಎಂದು ಒಳಿತಾಗಿ ಬೈಗಳ ಮಳೆಯನ್ನು ಸುರಿಸಿದರು.

"ಅಪ್ಪಾ. ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡುವದು ನಿಮ್ಮ ಧರ್ಮವಲ್ಲವೇ" ರಮೆಯು ತಗ್ಗಿದ ದನಿಯಲ್ಲಿ ನುಡಿದಳು.

"ಸಾಕು ನನಗೆ ಧರ್ಮವನ್ನು ಬೇರೆ ಕಲಿಸಲು ಬಂದೆಯಾ ಪಾತಕೀ!'

"ಹಾಯ್, ಹಾಯ್, ಪರಮಾತ್ಮಾ ನನ್ನನ್ನು ನೀನೇ ಕಾಯಬೇಕು. ದೀನಬಂಧು ರಕ್ಷಿಸು! ರಕ್ಷಿಸು!"

"ಡೋಕಾರಿ, ಪರಮಾತ್ಮಾ, ಪರಮಾತ್ಮಾ ಎಂದು ಒದರುವ ಹೊಸ ಸೋಗನ್ನು ಕಲಿತೆಯಾ? ಯಾವನಿದ್ದಾನೋ ನಿನ್ನ ದೀನ ಬಂಧು ನೋಡೋಣ ಇನ್ನು ಮೇಲೆ. ಹೋಗು ಆ ದೀನ ಬಂಧುವಿನ ಹತ್ತಿರವೇ ಹೋಗು. ನಿನ್ನ ಮೋರೆಯನ್ನು ಸಹ ನನಗೆ ತೋರಿಸಬೇಡ." ಗುಡುಗಿನಂತೆ ಗರ್ಜಿಸಿ ಗುಂಡೂರಾಯರು ರಮೆಯನ್ನು ಮನೆಯಿಂದ ಹೊರಕ್ಕೆ ದಬ್ಬಿ ಬಿಟ್ಟರು. 'ಸೂಳೆಯ ಪಾಪ ಸನ್ಯಾಸಿಗೆ' ಎಂಬುವದು ಸುಳ್ಳಲ್ಲ. ಅಣ್ಣಾಚಾರ್ಯರಂಥ ದುರಾತ್ಮನ ನೀಚಕೃತ್ಯಕ್ಕಾಗಿ ಸಾತ್ವಿಕಳಾದ ರಮೆಯು ಲೋಕಾಪವಾದಕ್ಕೆ ಗುರಿಯಾಗಿ ತೊಳಲಾಡಬೇಕಾಯಿತು. ಅವಳಿಗಿನ್ನಾರು ಗತಿ? ಭಿಕ್ಷಾಪಾತ್ರವೇ ಗತಿ.

೪

ಹಳ್ಳಿಯಲ್ಲಿ ಭಿಕ್ಷೆ ಹುಟ್ಟುವದು ಕಡಿಮೆ. ಮೇಲಾಗಿ ಆ ಹಳ್ಳಿಯವರಿಗೆ ರಮೆಯು ಮೋರೆಯನ್ನು ಹೇಗೆ ತೋರಿಸುವಳು ? ಅವಳು

ಅಲ್ಲಿ ಬಹಳ ಕಾಲ ನಿಲ್ಲಲಿಲ್ಲ. ಬೇರೊಂದು ಪಟ್ಟಣಕ್ಕೆ ತೆರಳಿದಳು. ಅಲ್ಲಿ ಭಿಕ್ಷೆ ಬೇಡಬೇಕಾಯಿತು. ಮೊದಮೊದಲು ಭಿಕ್ಷೆಯಿಂದಲೇ ಹೊಟ್ಟೆ ಹೊರಕೊಂಡಳಾದರೂ ಅವಳಿಗೆ ಅದನ್ನೆ ಅವಲಂಬಿಸಿರುವದು ಉಚಿತವೆನಿಸಲಿಲ್ಲ. ಅವಳು ಆ ನಗರದ ಮುನಸೀಪಾಲಿಟಿಯ ಕಸ ಹೊಡೆಯುವ ಒಬ್ಬ ಮುದುಕೆಯ ಪರಿಚಯ ಮಾಡಿಕೊಂಡಳು. ರಮೆಯ ಬಳಿಯಲ್ಲಿ ಮನೆಯಿಂದ ಹೊರಟ ಕಾಲಕ್ಕೆ ಉಟ್ಟ ಸೀರೆ ಬಿಟ್ಟು ಬೇರೆ ಒಂದೂ ವಸ್ತ್ರವಿರಲಿಲ್ಲ ಅದೂ ಬಹಳ ಹೊಲಸಾಗಿ ಹೋಗಿದ್ದಿತು ಒಂದೆರಡು ಹರಕು ಚಿಂದೆಗಳನ್ನು ಜನರಿಂದ ಬೇಡಿಕೊಂಡಿದ್ದಳು ಇಷ್ಟೇ ಅವಳ ವಸ್ತ್ರಾಲಂಕಾರ. ಅವಳನ್ನು ಕಂಡೊಡನೆ ಯಾರಾದರೂ ಭಿಕ್ಷುಕಳೆನ್ನದೆ ಇರುತ್ತಿರಲಿಲ್ಲ. ಮುನಸೀಪಾಲಿಟಿಯ ಕಸ ಬಳಿಯುವ ಮುದುಕೆಯ ಮುಂದೆ ತಾನೂ ಹೊಲೆಯಳೆಂದೇ ಹೇಳಿದಳು. ಆ ಮುದುಕೆಗೆ ಸಂಶಯ ಬಂದಿತಾದರೂ ಸದ್ಯಕ್ಕೆ ಮೌನವನ್ನು ತಾಳುವದೇ ಲೇಸೆಂದು ಬಗೆದು ಅವಳ ಆತ್ಮಕತೆ ಕೇಳುವ ಉಸಾಬರಿಗೆ ಹೋಗಲಿಲ್ಲ. ರಮೆಯು ಅವಳ ವಶೀಲಿ ಹಚ್ಚಿಸಿ ಕಸ ಬಳಿಯುವ ಕೆಲಸದಲ್ಲಿ ಸೇರಿಕೊಂಡಳು ಅಂದಿನಿಂದ ಅವಳು ಹೊಲಗೇರಿಯಲ್ಲಿ ಆ ಮುದುಕೆಯ ಬಳಿಯಲ್ಲಿಯೇ ಸ್ವಲ್ಪ ಭಾಗ ತೆಗೆದುಕೊಂಡು ವಾಸಿಸ ತೊಡಗಿದಳು. ಬಿಡುವಿನ ಕಾಲದಲ್ಲಿ ಓದುವಳು. ಬಂದ ಸಂಬಳದಲ್ಲಿಯೇ ಹಾಗೂ ಹೀಗೂ ಸ್ವಲ್ಪನ್ನು ಮಿಕ್ಕಿಸಿಕೊಂಡು ಒಂದೆರಡು ಒಳ್ಳೇ ಪುಸ್ತಕಗಳನ್ನೂ ನೋಟಬುಕ್ಕನ್ನೂ ತಂದುಕೊಂಡಳು. ಅದರಲ್ಲಿ ಆಗಾಗ್ಗೆ ತನ್ನ ಹೊಲಗೇರಿಯ ಅನುಭವಗಳನ್ನು ಬರೆದಿಡುವಳು.

೨೪

ಕ್ರಿಸ್ತಧರ್ಮದವರು ತಮ್ಮ ಧರ್ಮವನ್ನು ಬೆಳೆಸುವ ಕಾರ್ಯವನ್ನು ಕೈಕೊಂಡುದುದು ಎಲ್ಲೆಡೆಯಲ್ಲಿಯೂ ಕಂಡುಬರುತ್ತದೆ. ಸಾವಿರಾರು ಹಿಂದುಗಳು ಕ್ರೈಸ್ತ ಮತಕ್ಕೆ ಸೇರಿದ್ದಾರೆ. ಎಷ್ಟೋ ಜನರು ಇನ್ನೂ ಸೇರುವದರಲ್ಲಿದ್ದಾರೆ. ಇದರ ಅರ್ಥವೇನು? ಯಾವ ಹಿಂದೂ

ಧರ್ಮವು ತನ್ನ ಪವಿತ್ರವಾದ ಪ್ರಭಾವದಿಂದ ಇಡೀ ಜಗತ್ತಿನಲ್ಲಿ ವಿಖ್ಯಾತಿಗೊಂಡಿದೆಯೋ ಅಂಥ ಹಿಂದೂ ಧರ್ಮವು ಇಂದು ಇಷ್ಟು ಅವನತಿಗೆ ಬರಲು ಕಾರಣವೇನು? ಹಿಂದುಗಳು ತಮ್ಮ ನಿಜವಾದ ಧರ್ಮವನ್ನು ಮರೆತು ವ್ಯರ್ಥವಾಗಿ ಸಾವಿರಾರು ಜಾತಿಗಳನ್ನು ಕಲ್ಪಿಸಿ ಕೊಂಡು ಸ್ವಾರ್ಥಾಂಧರಾಗಿ, ಅಜ್ಞಾನಿಗಳಾಗಿ, ತಾನು ಹಿರಿಮ, ತನ್ನ ಪಂಗಡ ಹಿರಿದು ಎಂದು ಕದನ ಮಾಡುತ್ತಿರುವದೇ ಕಾರಣವಲ್ಲವೇ? ಹಿಂದೂ ಜನರನ್ನು ತಮ್ಮ ಧರ್ಮದಿಂದ ಬೇರೆ ಧರ್ಮಕ್ಕೆ ನೇರದಂತೆ ಕಾಯ್ದುಕೊಳ್ಳುವದು ಸನಾತನಿಗಳ ಕರ್ತವ್ಯವಲ್ಲವೇ? ಬರೇ ಹುಚ್ಚು ಹುಚ್ಚು ಕಲ್ಪನೆಗಳನ್ನು ಮಾಡಿಕೊಂಡು ಜಾತಿ ಜಾತಿಗಳಲ್ಲಿ ವ್ಯಾಜ್ಯ ಮಾಡಿದರೆ ಅದಕ್ಕೆ ಸನಾತನ ಧರ್ಮವೆನ್ನುವರೇ? ಎತ್ತ ನೋಡಿದತ್ತ ಸ್ವಾಭಿಮಾನಶೂನ್ಯರೇ ಕಾಣುವರಲ್ಲ. ಹೀಗಾದರೆ ಹಿಂದೂ ಧರ್ಮವು ಬಾಳುವದೆಂತು?

ಕ್ರಿಶ್ಚನ್ನ ಪಾದ್ರಿಯೊಬ್ಬನು ಒಂದು ದಿನ ತಮ್ಮ ಧರ್ಮದ ಪ್ರಚಾರ ಪತ್ರಿಕೆಗಳನ್ನೂ ಪುಸ್ತಕಗಳನ್ನೂ ತಿಗೆದುಕೊಂಡು ರಮೆಯು ಇದ್ದ ಬಿಡಾರದ ಬಳಿಗೆ ಹೋದನು ಅಲ್ಲಿ ಅವನ ವ್ಯಾಖ್ಯಾನಕ್ಕೆ ಆರಂಭವಾಯಿತು. ಓಣಿಯಲ್ಲಿ ಎಲ್ಲ ಜನರೂ ಸೇರಿದರು. ಕ್ರಿಸ್ತ ಮತಕ್ಕೆ ಸೇರಲೊಪ್ಪುವ ಜನರ ಹೆಸರನ್ನು ಆವನು ಬರೆದುಕೊಂಡನು. ರಮೆಗೇನೂ ಆ ಮತಕ್ಕೆ ಸೇರುವ ಇಷ್ಟವಿರಲಿಲ್ಲ. ಆದರೆ ಆ ಪಟ್ಟಣದ ಸರಕಾರೀ ಆಸ್ಪತ್ರೆಯಲ್ಲಿ ಒಂದು ನರ್ಸ ಸ್ಥಳವು ತೆರವು ಬಿದ್ದಿತ್ತಂತೆ ಆ ಪಾದ್ರಿಯು ಅಲ್ಪ ಸ್ವಲ್ಪ ಕನ್ನಡ ಬಲ್ಲ ಸ್ತ್ರೀಯರಾರಾದರೂ ಇದ್ದರೆ ಕೊಡಿಸುತ್ತೇನೆಂದು ಹೇಳಿದ್ದರಿಂದ ಅವಳು ತನ್ನ ಹೆಸರನ್ನು ಬರೆದು ಕೊಟ್ಟಿದ್ದಳು. ಅಂದಿನಿಂದ ಅವಳು ಕ್ರಿಶ್ಚನ್ನಳಾದಳು. ಆ ಪಟ್ಟಣದ ಆಸ್ಪತ್ರೆಯಲ್ಲಿ ನರ್ಸಾಗಿ ನೇಮಿಸಲ್ಪಟ್ಟಳು. ಅವಳು ನಡೆನುಡಿಗಳಲ್ಲಿ ಕ್ರಿಸ್ತ ಮತವನ್ನು ಅನುಸರಿಸಿರದಿದ್ದರೂ ಕ್ರಿಸ್ತ ಧರ್ಮದವರ ಲೆಕ್ಕದ ಮೇರೆಗೆ ಅವಳು ಕ್ರಿಶ್ಚನ್ನಳೇ ಸರಿ!

೬

ಶ್ರೀನಿವಾಸರಾಯರ ಹೆಸರನ್ನೊಮ್ಮೆ ವಾಚಕರು ಹಿಂದೆಯೇ ಓದಿದ್ದೀರಿ. ರಮೆಯನ್ನು ಮದುವೆಯಾಗಲು ಬಂದ ವರ. ಆ ನಗರದ

ಆಸ್ಪತ್ರೆಯಲ್ಲಿ ಡಾಕ್ಟರ. ತಿಂಗಳೊಂದಕ್ಕೆ ಅವನಿಗೆ ಎಂಬತ್ತು ರೂಪಾಯಿ ಸಂಬಳ. ಈಗ ಅಪ್ಪನು ಒಬ್ಬಂಟಿಗನಾಗಿದ್ದ. ತಂದೆತಾಯಿಗಳಿಬ್ಬರೂ ಇದೇ ವರ್ಷ ಸ್ವರ್ಗಸ್ಥರಾಗಿದ್ದರು. ಆಸ್ಪತ್ರೆಯ ಸಮೀಪದಲ್ಲಿಯೇ ಅವನ ಮನೆ. ತಕ್ಕ ಮಟ್ಟಿಗೆ ಮನೆ ದೊಡ್ಡದೇ ಎನ್ನಬಹುದು. ರಮೆಯಾದರೂ ಆಸ್ಪತ್ರೆಗೆ ಹೋಗಿ ಬರಲು ಸಮೀಪವಾಗಬೇಕೆಂದು ಶ್ರೀನಿವಾಸರಾಯನ ಬಿಡಾರದಲ್ಲಿಯೇ ಒಂದು ಕೊಠಡಿಯನ್ನು ಬಾಡಿಗೆ ತಗೆದುಕೊಂಡಿದ್ದಳು. ಇದೊಂದು ಸೋಜಿಗವಾದ ಸಂಗತಿ. ಮದುವೆಯ ಕಾಲಕ್ಕೆ ವಿಘ್ನ ಬಂದಿರದಿದ್ದರೆ ಅವರಿಬ್ಬರೂ ಪ್ರೇಮ ಸಾಮ್ರಾಜ್ಯದ ಅರಸು ಅರಸಿಯರಾಗಿ ನಲಿದಾಡಬಹುದಾಗಿತ್ತು. ಆದರೆ ಈಗ ಅವರು ಒಬ್ಬರಿಗೊಬ್ಬರು ಪರಕೀಯರು. ಇಬ್ಬರಿಗೂ ಪರಿಚಯವಿಲ್ಲ. ರಮೆಗೆ ಮಾತ್ರ ತನ್ನನ್ನು ಒರಿಸಲಿಕ್ಕೆ ಬಂದ ಡಾ. ಶ್ರೀನಿವಾಸರಾಯರು ಇವರೇ ಇರಬಹುದೆಂದು ಸಂಶಯ. ಆದರೆ ಅವಳು ತನ್ನ ನಿಜಸ್ಥಿತಿ ಹೊರಬೀಳಬಾರದೆಂದು ಗುರುತಿಲ್ಲದವರಂತೆಯೇ ಇರುತ್ತಿದ್ದಳು ಶ್ರೀನಿವಾಸರಾಯರಿಗೆ ಅವಳ ಗುರುತಿನ ಗಂಧ ಹತ್ತಲಿಲ್ಲ ಮೇಲಾಗಿ ರಮೆಯು ತನ್ನ ಹೆಸರನ್ನೀಗ ಬದಲಾಯಿಸಿದ್ದಳು. ಅವಳ ಹೆಸರೀಗ ಚಿನ್ನಮ್ಮ. ಹೀಗೆಯೆ ಅವರಿಬ್ಬರೂ ಪರಕೀಯರಾಗಿಯೇ ಪರಿಚಿತರಾದರು. ಒಂದೇ ಮನೆಯಲ್ಲಿರುವವರು. ಆದರಲ್ಲಿಯೂ ಒಬ್ಬಂಟಿಗರು. ಅಂದ ಬಳಿಕ ಪರಿಚಯ ಉಂಟಾಗುವದು ಸಹಜವೇ. ಚಿನ್ನಮ್ಮನ ನಡೆವಳಿಕೆಯ ಮೇಲಿಂದ ಅವಳು ನಿಜವಾದ ಕ್ರಿಶ್ಚನ್ನಳಲ್ಲವೆಂಬುದು ಅವನಿಗೆ ತಿಳಿದು ಬಂದಿತು. ಸೂಕ್ಷ್ಮ ರೀತಿಯಿಂದ ಅವಳ ಪ್ರತಿಯೊಂಂದು ರೀತಿ ನೀತಿಗಳನ್ನು ಪರೀಕ್ಷಿಸತೊಡಗಿದ. ಪವಿತ್ರವಾದ ಹಿಂದುವಿನಂತೆಯೇ ಅವಳ ಆಚರಣೆ. ಸಭ್ಯವಾದ ಗೋವಿನಂಥ ಸ್ವಭಾವ. ಮೃದುವಾದ, ಗಂಭೀರವಾದ, ನಿಷ್ಕಲಂಕವಾದ ಮಾತು ಕತೆ. ದವಾಖಾನೆಯಲ್ಲಿ ಕೂಡ ಬಂದ ಬಡಬಗ್ಗರ ಮೇಲೆ ತಿರಸ್ಕಾರ ಮಾಡದೆ ಮಾತೃಭಾವದಿಂದ ಆರೈಕೆ ಮಾಡುತ್ತಿದ್ದಳು. ದಯಾಗುಣಿ! ಎಷ್ಟೋ ಸಲ ರೋಗಿಗಳಿಗೆ ತನ್ನ ಸ್ವಂತ ವೆಚ್ಚದಿಂದ ಸಹ ಹಾಲು ಹಣ್ಣುಗಳನ್ನು ತರಿಸಿ ಕೊಡುತ್ತಿ

ದ್ದಳು ಇವೆಲ್ಲವುಗಳನ್ನು ಕಂಡು ಶ್ರೀನಿವಾಸರಾಯನು ಅವಳನ್ನು ಬಹಳ ಗೌರವಿಸುತ್ತಿದ್ದನು. ಇಂಥ ಸಾತ್ವಿಕ ಮೂರ್ತಿಯನ್ನು ಕಂಡರೆ ಯಾರಿಗೆ ತಾನೆ ಆಕ್ಕರತೆ ಬರಲಿಕ್ಕಿಲ್ಲ ?

೨

ಆದಿತ್ಯವಾರ. ಶ್ರೀನಿವಾಸರಾಯನಿಗಿಂದು ದವಾಖಾನೆಯಲ್ಲಿ ಕೆಲಸವಿರಲಿಲ್ಲ ಮನೆಯಲ್ಲಿಯೇ ಇದ್ದ. ರಮೆಗೆ ಮಾತ್ರ ಕಾಹಿಲೆಯವರ ಆರೈಕೆಗೆ ಹೋಗಬೇಕಾಗಿದಿತು ಕೊರಡಿಯು ಬಹಳ ಧೂಳೆದ್ದುದರಿಂದ ತನ್ನ ಎಲ್ಲ ಸಾಮಾನುಗಳನ್ನು ಹೊರಗಡೆಯ ಜಗಲಿಯ ಮೇಲಿಟ್ಟು ಅದನ್ನು ಸಾರಿಸಿದಳು ಆರುವ ವರೆಗೂ ಸಾಮಾನು ಹೊರಗೇ ಉಳಿಯಲೆಂದುಕೊಂಡು ದವಾಖಾನೆಗೆ ಹೊರಟು ಹೋದಳು ಶ್ರೀನಿವಾಸರಾಯನೊಬ್ಬನೇ ಪಡಸಾಲೆಯಲ್ಲಿ ಅತ್ತಿಂದಿತ್ತ ಓಡಾಡುತ್ತ ವಿರಮಿಸುತ್ತಿದ್ದ ಹಾಗೇ ತಿರುಗಾಡುತ್ತಿದ್ದಾಗ ಜಗುಲಿಯ ಅಡಿಯಲ್ಲಿ ಬಿದ್ದ ಚಿಕ್ಕದೊಂದು ನೋಟ ಬುಕ್ಕು ಕಂಡಿತು ಅವಸರದಲ್ಲಿ ರಮೆಯು ಅದನ್ನು ನೋಡಲಿಲ್ಲವೇನೊ; ಅಂತೆಯೇ ಆ ಪುಸ್ತಕವು ಅವನ ಕಣ್ಣಿಗೆ ಬಿತ್ತು. ಸಹಜವಾಗಿ ಶ್ರೀನಿವಾಸರಾಯನು ಆ ಪುಸ್ತಕವನ್ನು ಕೈಲಿ ತೆಗೆದುಕೊಂಡು ಓಲೆ ತೆಗೆಯ ಹತ್ತಿದ. ಮುತ್ತಿನಂಥ ಅಕ್ಷರಗಳಿಂದ ಆ ಪುಸ್ತಕವು ಕಂಗೊಳಿಸುತ್ತಿದ್ದಿತು. ಪಾನು ತೆರೆದೊಡನೆ ‘ ನನ್ನ ಹಣೇ ಬರಹ ’ ಎಂಬ ದೊಡ್ಡ ಹಿಲ್ಲೇ ಬರಹದ ಲೇಖ ಬಂದಿತ್ತು. ಅದನ್ನು ಓದ ತೊಡಗಿದ. ಓದ ಓದುತ್ತಿದ್ದಂತೆ ಬಳಬಳನೆ ಕಣ್ಣಲ್ಲಿ ನೀರು ಹರಿಯ ಹತ್ತಿದವು. ನಡು ನಡುವೆ ಆವೇಶದಿಂದ ಹಲ್ಲು ಕಟಗರಿಸುತ್ತಿದ್ದನು. ಅಣ್ಣಾಚಾರ್ಯರ ನೀಚತನದ ವಿಷಯವನ್ನು ಓದಿದ ಕೂಡಲೆ ಮೈಯೆಲ್ಲ ಉರಿಯತೊಡಗಿತು. ನಿರಪರಾಧಿಯಾದ ರಮೆಯು ಪಟ್ಟ ಸಂಕಟವನ್ನರಿತೊಡನೆ ಕೆಟ್ಟ ಕಸಿವಿಸಿಯಾಗತೊಡಗಿತು. ಮುಂದಿನ ಓಲೆಯನ್ನು ತಿರುವಿದ. ಅದರಲ್ಲಿ ‘ ನನ್ನ ಹೊಲೆತನದ ಅನುಭವ ’ ಎಂಬ ಬರಹವಿದ್ದಿತು. ಅದನ್ನು ಓದಿದ ಬಳಿಕಂತೂ ಶ್ರೀನಿವಾಸರಾಯನಿಗಾದ ದುಃಖವನ್ನು ಹೇಳುವದು ಅಸಾಧ್ಯ ಒಮ್ಮೆಲೆ ಸಾವಿರಾರು ಚೇಳುಗಳು ಕುಟುಕಿದಂತಾಯಿತು. ಮತ್ತೆ ಮುಂದಿನೋಲೆ

ತೆಗೆದ. 'ಕ್ರಿಶ್ಚನ್ನಳಾದುದೇಕೆ?' ಎಂಬ ಬರೆಹವಿದ್ದಿತು. ಅವಳ ಎಲ್ಲ ಕರುಣ ಕತೆಯನ್ನು ಓದತೊಡಗಿದಂತೆ ಗಾಯದ ಮೇಲೆ ಬರೆ ಎಳೆದಂತೆ ಹೆಚ್ಚು ಹೆಚ್ಚು ವೇದನೆಯಾಗಹತ್ತಿತು. ಕಣ್ಣೀರಿನ ಸುರಿ ಮಳೆಯು ಒಂದೇ ಸವನೆ ಭೋರ್ಗರೆಯಹತ್ತಿತು. ಹುಚ್ಚನಂತೆ ಒಮ್ಮೆ ಕೂಡ್ರುವನು. ಆವೇಶದಿಂದೊಮ್ಮೆ "ಅಯ್ಯೋ! ನೀಚ! ಅನಾಚಾರಿ! ನಿಮ್ಮಂಥ ಭಂಡು ಸನಾತನಿಗಳು ಎಂದು ಹಾಳು ಬಿದ್ದು ಹೋಗುವರೋ, ನಿಮ್ಮಂಥವರಿಂದಲೇ ಹರಿದು ಹಂಚಿ ಹೋದ ನಮ್ಮ ಹಿಂದೂ ಧರ್ಮವು ಹಾಳಾಗುತ್ತಲಿದೆ. ಅಸ್ಪೃಶ್ಯೋದ್ಧಾರ ವಂತೂ ಒತ್ತಟ್ಟಿಗಿರಲಿ. ನಿಮ್ಮಂಥ ದುರಾಚಾರಿಗಳಿಂದ ಬ್ರಾಹ್ಮ ಣರು ಕೂಡ ಅಂತ್ಯಜರಾಗುವ ಹೊತ್ತು ಬಂದಿತು. ಅಕಟಕಟಾ ಎಂದು ಒದರುವನು.

ಶ್ರೀನಿವಾಸರಾಯನು ಅಣ್ಣಾಚಾರ್ಯರನ್ನು ಇಷ್ಟು ಬೈದುದು ತನ್ನ ಮದುವೆಗೆ ಅವನು ವಿಘ್ನ ತಂದನೆಂಬ ಸಿಟ್ಟಿನಿಂದ ಅಲ್ಲ. ಆಚಾರ್ಯರು ಅನೇಕ ಕೆಲಸಗಳಲ್ಲಿ ಅಡ್ಡ ಬಂದಿದ್ದರು. ಶ್ರೀನಿ ವಾಸರಾಯನು ಅಂತ್ಯಜರ ಉದ್ಧಾರಕ್ಕಾಗಿ ಹೆಣಗಾಡುವವರಲ್ಲೊಬ್ಬನು. ಬಿಡುವಿನ ದಿನಗಳಲ್ಲಿ ಸಮೀಪದ ಹಳ್ಳಿಗಳಿಗೆ ಹೋಗಿ ಆ ಬಗ್ಗೆ ವ್ಯಾಖ್ಯಾನಗಳನ್ನು ಕೊಡುತ್ತಿದ್ದ. ಅಂತ್ಯಜರ ಗೋಳಾಟವನ್ನು ದೂರಮಾಡುವದಕ್ಕಾಗಿ ಹಸ್ತ ಪತ್ರಿಕೆಗಳನ್ನು ಹೊರಡಿಸಿ ಜನರಲ್ಲಿ ಪ್ರಚಾರ ನಡೆಸಿದ್ದ. ಆಗ್ಗೆ ಅಣ್ಣಾಚಾರ್ಯರು ಇವರ ವಿರುದ್ಧ ಪತ್ರಿಕೆಗಳನ್ನು ಹೊರಡಿಸಿದ್ದರು. ಅದರ ವಿರುದ್ಧ ಪತ್ರಿಕೆಗಳನ್ನು ಹೊರಡಿಸಿದ್ದರು. ಅದರ ಮೇಲೆ ತಮ್ಮ ಹೆಸರನ್ನವರು ಹಾಕಿರ ದಿದ್ದರೂ ಅವರದೇ ಕಾರಸ್ಥಾನವೆಂದು ಹಿಂದಿನಿಂದ ತಿಳಿದು ಬಂತು. ಅದರಲ್ಲಿ ಶ್ರೀನಿವಾಸರಾಯನ ಬಗ್ಗೆ ಅಲ್ಲದ ಸಲ್ಲದ ಟೀಕೆಗಳನ್ನೂ, ಅಸ್ಪೃಶ್ಯರೆಂದರೆ ಬಹಳ ದುರಾಚಾರಿಗಳೆಂದೂ, ಅವರು ಎಂದೂ ಸ್ಪೃಶ್ಯರಾಗಲಾರರೆಂದೂ ಮನಬಂದಂತೆ ಲೇಖವನ್ನು ಬರೆಯಲಾಗಿತ್ತು. ನೋಟಬುಕ್ಕಿನಲ್ಲಿ ಅಣ್ಣಾಚಾರ್ಯರ ದುರ್ನಡತೆಗಳನ್ನು ಓದುತ್ತಿ ದ್ದಂತೆ ಶ್ರೀನಿವಾಸರಾಯನಿಗೆ ಅವೆಲ್ಲ ನೆನಪಿಗೆ ಬರಹತ್ತಿದವು.

ಇದಕ್ಕಾಗಿ ಅವನಿಗಿಷ್ಟು ಕಡುತರವಾದ ಕೋಪ. ಅದೆಷ್ಟೋ ವೇಳೆ ಯವರೆಗೆ ಆ ಬುಕ್ಕನ್ನು ನೋಡುತ್ತ ಅವನು ಬೆಪ್ಪಾಗಿ ಕುಳಿತನು. ದವಾಖಾನೆಯಿಂದ ರಮೆಯು ಮರಳಿ ಬಂದಳು. ಅದೇನು ಕಾರಣವೊ ಅವನು ಆ ಪುಸ್ತಕವನ್ನು ಕೂಡಲೆ ತೊಡೆಯ ಅಡಿಯಲ್ಲಿ ಅಡಗಿಸಿ ಇಟ್ಟನು. ಅವಳನ್ನು ಕಂಡೊಡನೆ ಕಣ್ಣೀರು ಮಾತ್ರ ನಿಲ್ಲಲಿಲ್ಲ; ಪ್ರಳಾಪಕ್ಕೆ ಮತ್ತಿಷ್ಟು ಜೋರು ಬಂದಿತು.

"ಅದೇನು ಕಾರಣ ಅಳುತ್ತಿದ್ದೀರಿ?" ರಮೆಯು ಮುಂದೆ ಬಂದು ಕೇಳಿದಳು ಶ್ರೀನಿವಾಸರಾಯನ ಮುಖದಿಂದ ಮಾತು ಹೊರ ಡದಾದವು. ಯಾಕೆ ಹೇಳುವಂತಿಲ್ಲೇನು? ಹಾಗಿದ್ದರೆ ಹೇಳುವ ಕಾರ ಣವಿಲ್ಲ." ಎಂದು ನುಡಿದು ಸುಮ್ಮಾಳಾದಳು. ದುಃಖಾಗ್ನಿಯು ಅವ ನನ್ನು ಒಳಗಿಂದೊಳಗೇ ಬೇಯಿಸುತ್ತಿದ್ದಿತು. ಇದ್ದಕ್ಕಿದ್ದ ಹಾಗೆ ಒಮ್ಮೆಲೆ ಪ್ರಜ್ಞೆ ತಪ್ಪಿ ದೊಪ್ಪನೆ ಬಿದ್ದನು. ರಮೆಯು ಗಾಬರಿಗೊಂಡು ಒಳಗಿಂದ ಲೋಟಿವಲ್ಲಿ ನೀರು ತಂದು ಅವನನ್ನು ಉಪಚರಿಸ ತೊಡ ಗಿದಳು. ಅಸ್ತವ್ಯಸ್ತವಾಗಿ ಬಿದ್ದುಕೊಂಡ ಆತನನ್ನು ಸರಿಯಾಗಿ ಮಲ ಗಿಸ ಹೋದಳು. ಕೂಡಲೆ ಅವಳಿಗೆ ತನ್ನ ನೋಟ ಬುಕ್ಕು ಕಂಡಿತು. ಬೆಚ್ಚಿ ಬಿದ್ದಳು. ಇದಕ್ಕಾಗಿಯೇ ಇವರೀಗ ಮೂರ್ಛೆ ಹೋದರಲ್ಲ ಎಂದು ದುಃಖ. ತನ್ನ ನಿಜಸ್ವರೂಪವು ಹೊರಬಿದ್ದಿತಲ್ಲ ಎಂದು ಚಿಂತೆ ಅವಳ ಕಣ್ಣಲ್ಲಿಯೂ ತಾನಾಗಿಯೇ ಕಣ್ಣೀರಿನ ಹಳ್ಳವು ಉಗಮ ವಾಯಿತು. ಉಪಾಯಗಾಣದಾದಳು. ಇಳಿಮೋರೆ ಮಾಡಿಕೊಂಡು ಶ್ರೀನಿವಾಸರಾಯನಿಗೆ ಗಾಳೀ ಬೀಸುತ್ತ ಕುಳಿತಳು ಮೆಲ್ಲಗೆ ಪ್ರಜ್ಞೆ ಬರಹತ್ತಿತು 'ದುಷ್ಟಾ ಅನಾಚಾರಿ . ಕೋಮಲ ಕಂದಮ್ಮ ನನ್ನು ದುಃಖಕ್ಕೀಡು ಮಾಡಲಿಕ್ಕೆ ...ನಾಚಿಕೆ ಬರಲಿಲ್ಲವೇ?" ಎಂದು ಬಡಬಡಿಸುತ್ತ ಎದ್ದು ಕುಳಿತನು. ತನ್ನ ಮುಖವನ್ನೇ ಅವನಿಗೆ ಹೇಗೆ ತೋರಿಸಬೇಕೆಂದು ರಮೆಗೆ ಹೇಸಿಗೆ, ನಾಚಿಕೆ. ಉಗುರಿನಿಂದ ನೆಲ ವನ್ನು ಕೆದರುತ್ತ ಕೆಳಮೊಗವಾಗಿಯೇ ಸ್ವಸ್ಥವಾಗಿ ಕುಳಿತಳು. ಮುತ್ತು ಉದುರಿದಂತೆ ಅಶ್ರುಬಿಂದುಗಳು ಮಾತ್ರ ಬೀಳುತ್ತಿದ್ದವು. ಶ್ರೀನಿವಾಸ ರಾಯನಿಗೆ ತುಂಬಾ ಎಚ್ಚರ ಬಂದಿತು. ಮೈಮರೆತು ಮುಗ್ಧಳಂತೆ

ಕುಳಿತ ರಮೆಯನ್ನು ಕಂಡು ಕಳವಳಗೊಂಡನು. ತನ್ನ ಮೃದುವಾದ ಕೈಗಳಿಂದ ಅವಳ ಮೈದಡವುತ್ತ ಸಮಾಧಾನ ಪಡಿಸತೊಡಗಿದ.

"ರಮಾ, ಏಳು, ಶೋಕಸಾಗರದಲ್ಲಿದ್ದ ನನ್ನ ರತ್ನವೇ. ನಿನ್ನ ಬೆಲೆಯನ್ನರಿತ ಈ ಮಣಿಗಾರನು ಕಂಡೂ ಕಾಣದವರಂತೆ ಹಾಗೆಯೇ ಬಿಟ್ಟು ಹೋಗಲಾರನು. ನೀನಿನ್ನು ಕ್ರಿಶ್ಚನ್ನಳಲ್ಲ. ಚಿನ್ನಮ್ಮಳಲ್ಲ. ದವಾಖಾನೆಯ ದಾಸಿಯಲ್ಲ ಪವಿತ್ರವಾದ ಹಿಂದೂ ಧರ್ಮದವಳು ನೀನು! ಅಜ್ಞಾನಿಯಾದ ನಿಮ್ಮ ತಂದೆಯು ಆಜ್ಞಾಚಾರ್ಯರ ಮೇಲಿನ ಅಂಧ ಶ್ರದ್ಧೆಯಿಂದ ವಿಚಾರವಿಲ್ಲದೆ ನಿನ್ನನ್ನು ಹೊರದೂಡಿ ಕಷ್ಟ ಕ್ಕೀಡು ಮಾಡಿದಂತೆ ನಾನೆಂದಿಗೂ ಮಾಡತಕ್ಕವನಲ್ಲ" ಎಂದು ತರ ತರನಾಗಿ ಹೇಳಿ ಶ್ರೀನಿವಾಸರಾಯನು ಅವಳನ್ನು ಸಮಾಧಾನ ಪಡಿ ಸಿದ. ತನ್ನ ಉದಾರ ಹೃದಯದಲ್ಲಿ ಬೆಳಗುವ ಪ್ರೇಮದಾನವನ್ನಿತ್ತು ಹುಡಿಗೂಡುವ ಆ ಹೂವನ್ನು ಮುಡಿಗೇರಿಸಿಕೊಂಡ. ಅಂದಿನಿಂದ ಅವಳು ದವಾಖಾನೆಯ ತೊತ್ತಾಗಿ ಉಳಿಯಲಿಲ್ಲ ಶ್ರೀನಿವಾಸರಾಯನ ಮುತ್ತಾಗಿ ಸುಖವಾಗಿ ಕಾಲ ಕಳೆಯಹತ್ತಿದಳು. ಬರೀ ವಿಷಯ ಲಂಪಟಳಾಗಿ ಕಾಲ ಕಳೆಯಲಿಲ್ಲ. ಅಂತ್ಯಜೋದ್ಧಾರದ ಕಾರ್ಯ ವನ್ನು ನಡೆಸಿದಳು. ಹರಿಜನರ ಬಗ್ಗೆ ಅವಳಿಗೆ ಒಳ್ಳೇ ಸಹಾನು ಭೂತಿ. ತನ್ನ ಹೊಲೆತನದ ಅನುಭವದ ಅಸ್ಪೃಶ್ಯರ ಕರುಣಾಮಯ ವಾದ ನೊಂದ ಹೃದಯಗಳನ್ನು ಅರಿತುಕೊಂಡಿದ್ದಳು. ಅವರಿಗೆ ಸ್ವಚ್ಛತೆ ಪವಿತ್ರತೆಯ ಬಗ್ಗೆ ಪಾಠ ಹೇಳಿಕೊಡಹತ್ತಿದಳು. ಈ ಕಾರ್ಯ ದಲ್ಲಿ ಅವಳಿಗೆ ಒಳ್ಳೇ ಉತ್ಸಾಹ. ದೇವರು ಮೆಚ್ಚುವಂತೆ ತಿಳಿ ಮನ ಸ್ಸಿನಿಂದಲೂ, ಉಲ್ಹಾಸದಿಂದಲೂ ಹರಿಜನರ ಸೇವೆಯಲ್ಲಿ ಕಾಲಕಳೆಯ ತೊಡಗಿದಳು.

೮

ಪಾಪಕರ್ಮಗಳು ಕೊನೆಯವರೆಗೆ ಬೈಲಿಗೆ ಬೀಳದೆ ಇರುವ ಸಂಭವವು ಎಂದಿಗಾದರೂ ಶಕ್ಯವುಂಟೇ? ಪಾಪಿಷ್ಠರು ತಾವು ಮಾಡಿದ ಪಾಪದ ಫಲವನ್ನು ಭೋಗಿಸಿಯೇ ತೀರಬೇಕೆಂಬುದು ಪೃಥ್ವಿಯ ಸಾಮಾನ್ಯವಾದ ನಿಯಮವೇ ಆಗಿದೆ. ಅದನ್ನು ತಪ್ಪಿಸುವದು ಯಾರಿಂ

ದಲೂ ಸಾಧ್ಯವಿಲ್ಲ. ನಮ್ಮ ಅಣ್ಣಾಚಾರ್ಯರು ಬಹಳ ಕಾಮುಕ ರೆಂದು ಮೊದಲೇ ಹೇಳಿದ್ದೇವಷ್ಟೆ? ಅವರಿಗೀಗ ಗರ್ಮಿಯನ್ನುತ್ತಾರಲ್ಲ? ಆ ರೋಗವು ನಖಶಿಖಾಂತದಲ್ಲಿಯೂ ಅಂಟಿಕೊಂಡಿದೆ ಅವೆಲ್ಲ ಇವರ ದುರಾಚಾರದ ಫಲಗಳೆಂದು ಧಾರಾಳವಾಗಿ ಹೇಳಬಹುದು. ಓಡಾಡಲಿಕ್ಕೆ ಬರುವದಿಲ್ಲ. ಹೊರಳಾಡಲಿಕ್ಕೆ ಕೂಡ ಸಹ ಆಗುವದಿಲ್ಲ. ಮೈತುಂಬ ಹುಣ್ಣು. ಕೀವೇಕೀವು. ಕೆಟ್ಟ ವಾಸನೆ ಅವನ ಆರೈಕೆಗೆ ಯಾರೂ ಗತಿಯಿಲ್ಲ ಹೆಂಡತಿಯೊಬ್ಬಳು ಏನು ಮಾಡಿಯಾಳು ಪಾಪ! ಮೈಯಲ್ಲಿ ಬೇರೆ ಹುಳಗಳಾಗ ತೊಡಗಿದ್ದವು. ಆಸ್ಪತ್ರೆಗೆ ಒಯ್ದ ಹೊರತು ಗತಿ ಇರಲಿಲ್ಲ. ಒಂಟೆತ್ತಿನ ಬಂಡೀ ಮಾಡಿಕೊಂಡು ಒಯ್ಯಬೇಕೆಂದರೆ ಬಂಡಿಯವರೂ ಒಪ್ಪರು. ನೆರೆಹೊರೆಯವರಂತೂ ಅತ್ತಕಡೆಗೆ ಹಣಿಕಿ ಸಹ ನೋಡುತ್ತಿರಲಿಲ್ಲ. ನೆಚ್ಚಿನ ನೆಂಟರೂ ಮೆಚ್ಚಿನ ಗೆಳೆಯರೂ ಕೂಡ ಈಚೀಚೆಗೆ ಅವರನ್ನು ತುಂಬಾ ತಿರಸ್ಕಾರಮಾಡಿದ್ದರು. ಹೊಲೆಯರ ಹೊರತು ಬೇರೆ ಗತಿಯುಳಿಯಲಿಲ್ಲ. ಆವನ ಹೆಂಡತಿ ನಾಲ್ಕು ಹೊಲೆಯರನ್ನು ಕೂಲೀ ಗೊತ್ತು ಮಾಡಿ ಅವರನ್ನು ಕಲ್ಯಾಣವೆಂಬ ಪಟ್ಟಣದ ಆಸ್ಪತ್ರೆಗೆ ತೆಗೆದುಕೊಂಡು ನಡೆದಳು.

೯

ಸಂಜೆಯ ಐದು ಗಂಟೆಯ ಸಮಯ. ಆಸ್ಪತ್ರೆಯ ಮುಂದಿನ ಚೌಕದಲ್ಲಿ ಅಸ್ಪೃಶ್ಯರ ಸಭೆಯು ನೆರೆದಿದೆ. ಶ್ರೀನಿವಾಸರಾಯರೂ ರಮೆಯೂ ಕಟ್ಟೆಯ ಮೇಲೆ ಕುಳಿತಿದ್ದಾರೆ. ಸುತ್ತಲೂ ಅಸ್ಪೃಶ್ಯರ ತಂಡ. ಇದೇ ಸಮಯದಲ್ಲಿ ಹೆಬ್ಬಾಗಿಲ ಹತ್ತರ ನಾಲ್ಕಾರು ಹೊಲೆಯರು ಮಂಚದ ಮೇಲೆ ಯಾರನ್ನೋ ಹೊತ್ತುಕೊಂಡು ಬಂದರು. ಅದನ್ನು ಕಂಡು ಆ ಕಡೆಗೇ ಎಲ್ಲರೂ ನೋಡಹತ್ತಿದರು. ಹೆಣವಿರಬಹುದೆಂದೊಬ್ಬನ ಹೇಳಿಕೆ ಬಹಳ ಕಾಯಿಲೆ ಇರಬಹುದೆಂದಿನ್ನೊಬ್ಬನ ಹೇಳಿಕೆ. ಹೀಗೆ ತಮ್ಮ ಮನಬಂದಂತೆ ತರ್ಕ ಕಟ್ಟಹತ್ತಿದರು. ಅವರ ಹಿಂದಿನಿಂದ ಅಣ್ಣಾಚಾರ್ಯರ ಹೆಂಡತಿ ಬರುತ್ತಿರುವದನ್ನು ನೋಡಿ ರಮೆಯು ಚಕಿತಳಾದಳು. ಶ್ರೀನಿವಾಸರಾಯನಿಗೆ ಅವಳ

ವಿಷಯವಾಗಿ ಹೇಳತೊಡಗಿದಳು. ದವಾಖಾನೆಯ ಕಟ್ಟೆಯ ಬಳಿ ಬಂದಬಳಿಕ ಹೊಲೆಯರು ಅವರನ್ನು ಕೆಳಕ್ಕಿಳಿಸಿದರು. ಅಣ್ಣಾಚಾರ್ಯರ ಹೆಂಡತಿ ಶ್ರೀನಿವಾಸರಾಯನ ಕಾಲನ್ನು ಹಿಡಿದುಕೊಂಡು ಕಣ್ಣೀರಿಡುತ್ತ ತನ್ನ ಪತಿಯನ್ನು ದವಾಖಾನೆಯಲ್ಲಿರಿಸಿಕೊಂಡು ಚಿಕಿತ್ಸೆ ಮಾಡಬೇಕೆಂದು ಅಂಗಲಾಚಿ ಬೇಡಿಕೊಂಡಳು.

"ಮಾಡಿದವನುಣ್ಣುವನು ಮಣಿಯಂಥ ಕಡಬು'' ಎಂಬುದು ಸುಳ್ಳಲ್ಲವೆಂದಾಕೊಳ್ಳುತ್ತ ಶ್ರೀನಿವಾಸರಾಯನು ಆಚಾರ್ಯರ ಸಮಿಪಕ್ಕೆ ಹೋದನು

"ಏನು ಆಚಾರ್ಯರೇ, ನಿಮ್ಮ ಸನಾತನ ಧರ್ಮವೆಲ್ಲಿಪ? ನಿಮ್ಮನ್ನು ಹೊರಲಿಕ್ಕೆ ಸನಾತನಿಗಳ್ಯಾರೂ ಬರಲಿಲ್ಲವೇ? ಅಸ್ಪೃಶ್ಯ ಬಂಧುಗಳೇ ನಿಮಗೆ ಬೇಕಾದರಲ್ಲವೆ? ಅಲ್ಲಿದ್ದ ಅಸ್ಪೃಶ್ಯ ಬಾಂಧವನೊಬ್ಬನು ಕೇಳಿದ.

"ಮಾಡಿದ್ದುಣ್ಣೋ ಮಾರಾಯಾ'' ಎಂದು ಅಲ್ಲಿ ನೆರೆದವರಲ್ಲಿ ಕೆಲವರು ಆಡತೊಡಗಿದರು

ಮರಣ ಸಮೀಪಿಸಿದಂತೆ ಆಚಾರ್ಯರಿಗೆ ತಮ್ಮ ಕೆಟ್ಟ ನಡತೆಗಳ ಬಗ್ಗೆ ಪಶ್ಚಾತ್ತಾಪವೆನಿಸ ಹತ್ತಿತು. "ಅಯ್ಯೋ ನಾನು ಮಹಾ ನೀಚ! ವ್ಯರ್ಥವಾಗಿ ಅಂತ್ಯಜರನ್ನು ಹೀಯಾಳಿಸಿದೆ ನಿಜವಾಗಿ ಅವರು ಹೀನರಲ್ಲ. ಹೊಲೆಯರಲ್ಲ. **ನಾನೇ ಹೊಲೆಯ!** ಎಷ್ಟೋ ಮಾನವತಿಯರ ಮೇಲೆ ಬಲಾತ್ಕಾರ ಮಾಡಿದೆ. ರಮಾಬಾಯೀ ಕ್ಷಮಿಸು, ಕ್ಷಮಿಸು ದೇವಾ ಈ ಚಾಂಡಾಲನನ್ನು ರಕ್ಷಿಸು'' ಮುಂತಾಗಿ ಹೇಳಿ ಒಂದೇ ಸವನೇ ಅಳತೊಡಗಿದನು.

ಇನ್ನು ಅತ್ತು ಉಪಯೋಗವೇನು? ಸುಮ್ಮನೆ ತ್ರಾಸು ತೆಗೆದುಕೊಳ್ಳಬೇಡಿರಿ. ವ್ಯರ್ಥವಾಗಿ ಜೀವಕ್ಕೆ ಎರವಾಗಬೇಕಾದೀತು? ಶ್ರೀನಿವಾಸರಾಯನು ಪರಿಪರಿಯಾಗಿ ಹೇಳಿದ. ಆದರೆ ಆಚಾರ್ಯರಿಗೆ ತಡೆಯುವದಾಗಲಿಲ್ಲ. ತನ್ನ ಪಾಪಗಳ ಸಾಕ್ಷಿಗಾಗಿ ಪ್ರತ್ಯಕ್ಷವಾಗಿ ನಿಂತ

ಅಸ್ಪೃಶ್ಯರೂ ರಮಾಬಾಯಿಯೂ ಎದುರಿನಲ್ಲಿ ನಿಂತಿರಲು ಅವನಿಗೆ ಸಮಾಧಾನವಾಗುವ ಬಗೆಯಾದರೂ ಹೇಗೆ ? ಬಿಕ್ಕಿ ಬಿಕ್ಕಿ ಅಳತೊಡಗಿದನು ಅಯ್ಯೋ ನನಗೀಗ ತುಂಬಾ ಪಶ್ಚಾತ್ತಾಪವಾಗಿದೆ. ಅಂತ್ಯಜರ ಬಗ್ಗೆ ನನ್ನಲ್ಲಿದ್ದ ಕೆಟ್ಟ ಭಾವನೆಗಳು ಅಳಿದಿವೆ. ದೇವರ ದಯದಿಂದ ನಾನು ಈ ಕುತ್ತಿನಿಂದ ಪಾರಾದರೆ-ಹಗಲಿರುಳು ಅಸ್ಪೃಶ್ಯರ ಸೇವೆ ಮಾಡಿ ನನ್ನ ಪಾಪಗಳನ್ನು ತೊಳೆದು ಕೊಳ್ಳುತ್ತೇನೆ. ದೇವಾ ಹೊಲೆಯರು ಕೀಳರಲ್ಲ; ನಾನೇ ಕೀಳು; ನಾನೇ ಹೊಲೆಯ" ಎಂದೆನ್ನುತ್ತ ಒಂದು ಸಲ ಎದ್ದು ಕೂಡ್ರಲೆತ್ನಿಸಿದನು. ಆದರೆ ಕೂಡಲೆ ಎಚ್ಚರ ತಪ್ಪಿತು. ಕಣ್ಣು ಮುಚ್ಚಿದನು ತನ್ನ ಸಾಕ್ಷಿಗಾರರು ಈ ಜಗತ್ತಿನಲ್ಲಿರುವಾಗ ಕಣ್ಣು ತೆರೆಯುವದಾದರೂ ಹೇಗೆ ಎಂದು ಆಲೋಚಿಸಿದನೋ ಏನೋ, ಕಣ್ಣು ಮುಚ್ಚಿದವನು ಶಾಶ್ವತವಾಗಿ ಮುಚ್ಚಿಯೇ ಬಿಟ್ಟನು.

---

# ದೇಶದ್ರೋಹಿ

ನನಗಾಗ ಸಾಹೇಬರೆಂದರೆ ದೇವರಿಗಿಂತಲೂ ಮಿಗಿಲಾದವರೆಂಬ ಭಾವನೆ. ನನಗೊಬ್ಬನಿಗೇ ಏಕೆ ನಮ್ಮೂರವರೆಲ್ಲರಿಗೂ ಹ್ಯಾಟ್ ಬೂಟ್ ಹಾಕಿಕೊಂಡು ಟಿಸ್ ಪಿಸ್ ಎನ್ನುತ್ತ ತಿರುಗಾಡುವವರು ದೊಡ್ಡ ಮನುಷ್ಯರೆಂದು ಅನ್ನಿಸುತ್ತಿದ್ದಿತು ಮುಸಾಫರ ಬಂಗ್ಲೆಯಲ್ಲಿ ಯಾವನೊಬ್ಬ ಸಾಹೇಬನು ಬಂದಿಳಿದೊಡನೆ ಮೋಟಾರ ಸುತ್ತಲೂ ನೊಣ ಮುಕರಿದಂತೆ ಜನರೆಲ್ಲರೂ ಸುತ್ತಗಟ್ಟುತ್ತಿದ್ದರು. ಮೋಟಾರ ಹತ್ತರ ನಿಂತುಕೊಳ್ಳುವಷ್ಟು ನಾನೇನೂ ಕೀಳು ತರಗತಿಯ ಮನುಷ್ಯ ನಲ್ಲ. ಚಹಾ, ರೋಟು, ಬಿಸ್ಕೀಟು, ಮುಂತಾದ ಖಾದ್ಯೋಪಾದ್ಯ ನೈವೇದ್ಯಗಳನ್ನು ತೆಗೆದುಕೊಂಡು ಬಂಗ್ಲೆಯ ಒಳಗಡೆಯಲ್ಲಿಯೇ ನುಗ್ಗುತ್ತಿದ್ದೆನು. ದೇವರ ಮೇಲೆ ಹೂ ತಪ್ಪಬಹುದು- ಏಕೆ ಪೂಜೆ ಪುನಸ್ಕಾರಗಳಿಗೆ ತಿಲಾಂಜಲಿಯನ್ನಿತ್ತು ಎಷ್ಟೋ ವರ್ಷಗಳಾಗಿ ದ್ದವು ನನಗೆ. ಆದರೆ ಬಂಗ್ಲೆಯಲ್ಲಿ ಬಂದಿಳಿಯುವ ಯಾವ ಸಾಹೇಬ ನಿಗೂ ನನ್ನ ನೈವೇದ್ಯದ ಎಡೆ ತಪ್ಪಿಲ್ಲ ಅವರು ನನ್ನನ್ನು ಬಳಿಯಲ್ಲಿ ಕರೆದು ಕುಳ್ಳಿರಿಸಿಕೊಂಡರೆ ಒಳ್ಳೇ ಆನಂದವಾಗುತ್ತಿತ್ತು. ಅವರೊಡನೆ ಮಾತನಾಡಿದೆನಲ್ಲ ಎಂಬ ಜಂಬ ತಿಂಗಳಗಟ್ಲೆ ನಮ್ಮ ಹಳ್ಳಿಗರ ಮುಂದೆ "ಸಾಹೇಬವಾಕ್ಯ" ಅಂದರೆ ಅವರ ಬಾಯಿಂದ ಬಂದ ಮಾತು ಗಳ ವಿಷಯವಾಗಿ ಪಂಟು ಬಡಿಯುವದು ನನ್ನ ಉದ್ಯೋಗವಾಗಿದ್ದಿತು. ಉಪ್ಪು ಕಾರ ಹಚ್ಚಿ ಮಾತನಾಡುವ ಕುಶಲತೆಯಾದರೂ ಚೆನ್ನಾಗಿ ನನ್ನ ಕೈವಶವಾಗಿದ್ದಿತೆಂದರೆ ಏನೂ ತಪ್ಪಾಗಲಾರದು.

ಹೀಗಾಗಿ ನನ್ನ ಯೋಗ್ಯತೆಯು ಹಳ್ಳಿಗಳಲ್ಲೆಲ್ಲ ಹರಡಿದ್ದಿತು. ಎಲ್ಲರೂ ನನ್ನ ಮುಖಾಂತರ ನ್ಯಾಯ ನಿಗದಿಗಳನ್ನು ಕೋರ್ಟಿನಲ್ಲಿ ನಡೆ ಸಿದರೆ ಲಾಭವಾಗುವದೆಂದು ನಂಬಿದ್ದರು 'ಲಂಚ' ದೇವತೆಯು ನನ್ನ ಮೇಲೆ ತುಂಬಾ ಪ್ರಸನ್ನಳಾಗಿದ್ದಳು. ಏನಿಲ್ಲ ಎಂತಿಲ್ಲ ಇಷ್ಟು! ನಾನು ವಕೀಲನಾಗಿದ್ದರಂತೂ ನನ್ನ ಕೈ ಹಿಡಿಯುವವರೇ ಉಳಿಯುತ್ತಿದ್ದಿಲ್ಲ

ನನ್ನ ಮೇಲೆ ತುಂಬಾ ಪ್ರಸನ್ನಳಾಗಿದ್ದಳು. ಏನಿಲ್ಲ ಎಂತಿಲ್ಲ ಇಷ್ಟು! ವಕೀಲನಾಗಿದ್ದರಂತೂ ನನ್ನ ಕೈ ಹಿಡಿಯುವವರೇ ಉಳಿಯುತ್ತಿರಲಿಲ್ಲ.

* * * *

ನಮ್ಮೂರು ಕುರ್ತಕೋಟಿ. ಗದಗಿಗೆ ತೀರ ಸಮೀಪ ಅಲ್ಲಿಯ ಗೌಡರು ನಾವಾಗಿದ್ದೆವು ನಮ್ಮ ತಂದೆ ಬಲು ಜಾಣರು ಹಾಗೂ ಅತಿ ಜೀನರು. " ಸೊಣ ಚೀಪುವವ " ಎಂದು ಅವರಿಗೆ ಅವರ ಜೊತೆಗಾರರು ಹಾಸ್ಯಮಾಡುತ್ತಿದ್ದರು. ಆದರ ಅವರಿಗೆ ತಕ್ಕಂತೆ ಅವರ ಮಗ ನಾನಾಗಲಿಲ್ಲ. ನಾನು ಬಲು ದುಂದುಗಾರಿಕೆ ಮಾಡುವವ. ನನ್ನ ಸಲುವಾಗಿ ನಮ್ಮ ತಂದೆ ಬೇಸತ್ತು ಹೋಗಿದ್ದರು ಅದೇ ಹೊಟ್ಟೆಯ ಬೇನೆಯಲ್ಲಿ ಅವರು ಸತ್ತಿರಬಹುದೋ ಎಂದು ನನಗೆ ಇನ್ನೂ ಕೂಡ ಸಂದೇಹ

ಕನ್ನಡ ನಾಲ್ಕು ಇಯತ್ತೆ ಮುಗಿದೊಡನೆ ನಾನು ಗದಗಿನ ಹಾಯಸ್ಕೂಲಿಗೆ ಸೇರಿದೆನು. ಆ ಸ್ಕೂಲಿಗೆ ನಾಲ್ಕಾರು ಕ್ರಿಶ್ಚನ್ ಹುಡುಗರೂ ಬರುತ್ತಿದ್ದರು ಸಾಹೇಬರ ವಿಷಯವಾಗಿದ್ದ ನನ್ನ ಭಾವನೆಯನ್ನಂತೂ ಮೇಲೆಯೇ ಹೇಳಿದ್ದೇನಷ್ಟೇ ನಾನು ಸ್ಕೂಲಿನಲ್ಲಿ ಮಿಕ್ಕ ಎಲ್ಲರಗಿಂತಲೂ ಕ್ರಿಶ್ಚನ್ ಬಾಲಕರೊಡನೆಯೇ ಹೆಚ್ಚು ಸ್ನೇಹ ಬೆಳಸಿದೆ ಅಭ್ಯಾಸದ ಮೇಲೆ ನನ್ನ ಲಕ್ಷವು ಇರುತ್ತಿರಲಿಲ್ಲ. ಅವರ ಉಡಿಗೆ ತೊಡಿಗೆಗಳನ್ನು ನೋಡುತ್ತ ಬೆಪ್ಪನಂತೆ ವರ್ಗದಲ್ಲಿ ಕುಳಿತು ಕೊಳ್ಳುತ್ತಿದ್ದ ಆ ಸಾಹೇಬ ತೊಡಪುಗಳು ನನ್ನ ಮನವನ್ನು ತುಂಬಾ ಸೆಳೆದುಕೊಂಡವು ನಾನು ಅಪ್ಪನಿಗೆ ಕಾಟ ಕೊಟ್ಟು ಬೂಟು ಕೊಂಡೆ. ಕೆಲವು ದಿವಸಗಳಲ್ಲಿಯೇ ಸೂಟು ಹೊಲಿಸಿದೆ. ಹ್ಯಾಟು ಮಾತ್ರ ಬೇಗನೆ ಸಂಪಾದಿಸಲಿಲ್ಲ ' ಕೇಳಲಿಕ್ಕೆ ಧೈರ್ಯ ಬರಲಿಲ್ಲ. ಜನರೇನಂದಾರೋ ಎಂಬದೊಂದು ಬೆದರಿಕೆ ಬೇರ. ನಮ್ಮಪ್ಪ ಬೇಗನೆ ಸತ್ತು ಹೋದರೆ ಇವೆಲ್ಲಕ್ಕೂ ಸ್ವತಂತ್ರನಾಗಬಹುದಲ್ಲವೇ? ಎಂಬ ಕೀಳ ವಿಚಾರವು ಕೂಡ ಮನದಲ್ಲಿ ಬಾರದೆ ಇರಲಿಲ್ಲ. ಇವೆಲ್ಲ ಆ ಸಾಹೇಬ ಪದ್ಧತಿಯೆಂಬ ಮಾಟವು ನನ್ನ ಮೇಲೆ ಮಾಡಿದ ಪ್ರಭಾವ! ಆ ಸಾಹೇಬ

ಮಕ್ಕಳಂತೆ ಅಭ್ಯಾಸ ಮಾಡುವ ಕುತೂಹಲ ಬುದ್ಧಿಯು ನನ್ನಲ್ಲಿರಲಿಲ್ಲ. ಅವರು ಮ್ಯಾಟ್ರಿಕ್ ಪಾಸಾಗಿ ನಾಲ್ಕು ವರುಷಗಳಾಗಿದ್ದರೂ ನಾನು ಹಾಡಿದ್ದೇ ಹಾಡೋ ಕಿಸಬಾಯಿ ದಾಸಾ ಎಂಬಂತೆ ಇನ್ನೂ ಅದರಲ್ಲಿಯೇ ತೊಳಲಾಡುತ್ತಿದ್ದೆ. ಅಷ್ಟರಲ್ಲಿಯೇ ನನ್ನಿಷ್ಟವನ್ನರಿತೋ ಏನೋ ಎಂಬಂತೆ ನನ್ನ ತಂದೆ ಸ್ವರ್ಗಸ್ಥರಾದರು. ಅಷ್ಟೇ ನೆವ ಸಾಕಾಯಿತು ನನಗೆ. ಕೇಳುವದೇನು ಶಾಲೆಗೆ ಶರಣು ಹೊಡೆದೆನು. ನಮ್ಮ ತಂದೆಯ ತರುವಾಯ ನಮ್ಮೂರ ಪಟೇಲಕಿಯು ನನ್ನದೇ ಅದರಲ್ಲಿಯೂ ಇಂಗ್ಲೀಷು ಓದಿದ ಸುಧಾರಕ ಅಂದ ಬಳಿಕ ನನ್ನ ಕೈ ಹಿಡಿದವರಾರು? ನಮ್ಮೂರ ದೊರೆ ಆದೆನು ನಾನು. ದೊರೆಯಾದೊಡನೆಯೇ ಕಿರೀಟ ಧರಿಸಲು ಸ್ವತಂತ್ರನಾದೆನೆನ್ನಿಸಿತು. ಕಿರೀಟವೆಂದರೆ ಬೇರೆ ಏನೂ ಅಲ್ಲ. ಮೊದಲಿನಿಂದಲೂ ನಾನು ಬಯಸುತ್ತಿದ್ದ ಸಾಹೇಬರ ಟೊಪ್ಪಿಗೆ! ಅದಕ್ಕೆ ಇಂಗ್ಲೀಷದಲ್ಲಿ ಹ್ಯಾಟ (Hat) ಎನ್ನುತ್ತಾರೆ ನಮ್ಮ ಹಳ್ಳಿಯವರು ಬುಟ್ಟಿಯನ್ನುತ್ತಿದ್ದರು. ಕಿರೀಟ ಒಂದನ್ನೇಯೇಕೆ ಯುರೋಪಿಯನ್ನ ಸಾಹೇಬರನ್ನು ಮೀರಿಸುವಷ್ಟು ಉಡಿಗೆ ತೊಡಿಗೆಗಳನ್ನು ಕೂಡ ತಂದು ಕೊಂಡೆ. ಆಮೇಲೆ ಮೊದಲಿದ್ದ ಮನೆ ನನಗೆ ತುಚ್ಛವೆನಿಸಿತು. ಒಂದು ಬಂಗ್ಲೆ ಕಟ್ಟಿಸಿ ಅದಕ್ಕೆ ಮುಂದೆ ಬಾಗಬಾಗಾಯತ್ತು ಮೊದಲಾದವುಗಳನ್ನು ಮಾಡಿಸಿ ಅದರಲ್ಲಿ ಇರತೊಡಗಿದೆ. ನನಗೆ ಯಾವ ಕೊರತೆಯೂ ಉಳಿಯಲಿಲ್ಲ. ಕೈಯೊಳಗೆ ಬೇಕಾದಷ್ಟು ಜನ ದಾಸದಾಸಿಯರು. ಗಂಟೆ ಬಾರಿಸಿದೊಡನೆಯೇ 'ಸರಕಾರ' ಎಂದು ಮುಂದೆ ಬಂದು ಸಿದ್ಧರಾಗಿರುತ್ತಿದ್ದರು. ಇದೆಲ್ಲ ನಿಜ. ಆದರೆ ಒಂದು ವಿಷಯದಲ್ಲಿ ಮಾತ್ರ ನನಗೆ ಯುರೋಪಿಯನ್ನರನ್ನು ಸರಿಗಟ್ಟುವದಾಗಲಿಲ್ಲ. ಯಾಕಂದರೆ ನಾನು ಕಪ್ಪು ವರ್ಣದವ. ಎಷ್ಟು ಬಗೆಯ ಬಿಳಿ ಹುಡಿಗಳನ್ನು ಬಡಿದುಕೊಳ್ಳುತ್ತಿದ್ದೆನಾದರೂ ಅವರಷ್ಟು ಕೆಂಪಗೆ ಮಾತ್ರ ಕಾಣುತ್ತಿರಲಿಲ್ಲ. ಅದನ್ನುಳಿದು ಬೇರೆ ಯಾವ ವಿಷಯದಲ್ಲಿಯೂ ನನ್ನಲ್ಲಿ ಕುಂದಿರಲಿಲ್ಲ. ಕೆಂಪು ಮೋರೆಯವರನ್ನು ಕಂಡರೆ ಹಳ್ಳಿಯವರು ಹೇಗೆ ಬೆದರುವರೋ ಹಾಗೆಯೇ ನನ್ನನ್ನು ಕಂಡರೂ ಬೆದರುವರು. ನನ್ನ ಮಾತುಗಳೇನು ಸಾಮಾನ್ಯ

ವಲ್ಲ. ಕರುಳು ಕೊಯ್ಯುವಂಥ ಕಠೋರವಾದ ಮಾತುಗಳು. ಅಧಿಕಾರವನ್ನಾದರೂ ಜೋರಾಗಿ ನಡಿಸುತ್ತಿದ್ದೆ. ನಾನಾಡಿದ ಮಾತೇ ಮಾನ್ಯವಾಗಬೇಕು ಇಲ್ಲದಿದ್ದರೆ ನನ್ನ ಕಣ್ಣು ಕೆಂಪೇರುತ್ತಿದ್ದವು ಹಳ್ಳಿಗರ ವಿಷಯವಾಗಿ ಕೊಂಚವೂ ಕೂಡ ಉದಾರ ಬುದ್ಧಿಯು ನನ್ನಲ್ಲಿರಲಿಲ್ಲ. ಅವರು ಉಪವಾಸ ಸಾಯುತ್ತಿರುವದನ್ನು ಕಣ್ಣಾರೆ ಕಂಡರೂ ಅವರಿಗೆ ಗೋಳಾಟ ಕೊಟ್ಟೇ ತೀರುತ್ತಿದ್ದೆನು. ನಮ್ಮ ಹಳ್ಳಿಯಲ್ಲಿ ನನ್ನ ಗೋಳಾಟದ ಜಾಲದಲ್ಲಿ ಸಿಲುಕದೆ ಇದ್ದವರು ವಿರಳ. ಹಳ್ಳಿಗರನ್ನು ಸುಲಿಗೆ ಮಾಡುವದರಲ್ಲಿ ಅಗ್ರಸ್ಥಾನವು ನನಗೇ ದೊರೆತಿತ್ತೆನ್ನಬಹುದು. ಬಲಾತ್ಕಾರ ಮಾಡಿ ಅವರಿಂದ ಲಂಚ ವಸೂಲ ಮಾಡುತ್ತಿದ್ದೆನು. ಇಷ್ಟೆಲ್ಲ ಜೋರು ಮಾಡುತ್ತಿದ್ದೆನೆಂದು ನಾನೊಬ್ಬ ವೀರ ಬಹದ್ದೂರನೆಂದು ಮಾತ್ರ ಯಾರೂ ತಿಳಿಯಬೇಡಿ! ಹಳ್ಳಿಯ ಕೆಂಚರ ಮುಂದೆಯೇ ನನ್ನೆಲ್ಲ ಅಧಿಕಾರ. ಸರಕಾರೀ ಅಧಿಕಾರಿಗಳೆದುರಿನಲ್ಲಿಯೂ ಸಾಹೇಬರೆದುರಿನಲ್ಲಿಯೂ ನಾಯಿಯಂತಿರುತ್ತಿದ್ದೆ. ಅವರ ಮಾತಿಗೆ ಮರುಳಾಗಿ ಅವರು ಹೇಳಿದಷ್ಟು ಹಣ ಸುರುವುತ್ತಿದ್ದೆ. ಅವರಿಂದ ಪ್ರತಿಷ್ಠೆ ಪಡೆಯಬೇಕೆಂದು ಎಲ್ಲ ಬಗೆಯಿಂದಲೂ ಅವರ ಸೇವೆ ಮಾಡುತ್ತಿದ್ದೆ. ಅವರನ್ನು ಪೂಜಿಸುತ್ತಿದ್ದೆ. ವಕೀಲರಂತೂ ನನ್ನ ಹೆಸರಿನಿಂದ ದಿನಾಲು ಹಾಲು ತುಪ್ಪ ತಿನ್ನುತ್ತಿದ್ದರು. ಅವರೆಲ್ಲರ ದಲಾಲನಾಗಿದ್ದೆನೆನ್ನಬಹುದು ನಾನು ವಕೀಲರ ಪಾಲಿಗೆ ದಲಾಲನಾಗಿದ್ದೆನಾದರೂ ರೈತರ ಪಾಲಿಗೆ ನಾನು ಕೊಲೆಗಡಕ! ದರೋಡೆಖೋರ! ವಕೀಲರಿಗೂ ಅಮಲದಾರರಿಗೂ ನಾನು ತಿನ್ನಿಸುತ್ತಿದ್ದುದು ಹಾಲು ತುಪ್ಪವಲ್ಲ! ಅನ್ನವೆಂದು ಬಾಯ್ಬಿಡುತ್ತ ದೈನ್ಯಾವಸ್ಥೆಯಿಂದ ತೊಳಲಾಡುತ್ತಿರುವ ಬಡಜನರ ಬಡಕಾದ ಶರೀರದೊಳಗಿನ ರಕ್ತದ ಹನಿ! ಅಯ್ಯೋ, ನನಗೆ ಈಗ ಇದು ತಿಳಿಯುತ್ತಿದೆ. ವಿಲಾಸ ಮದದಲ್ಲಿ ಕುರುಡನಾಗದಿದ್ದರೆ ಇಂಥ ಪಾಪವನ್ನು ಮಾಡುತ್ತಿರಲಿಲ್ಲವೇನೋ? ಅಯ್ಯೋ ಅದೆಲ್ಲ ನಿಜ. ಮಾಡಲೇನು? ಏಟು ಬಿದ್ದ ಹಾಗೆಲ್ಲ ಬುದ್ಧಿ ಬರುತ್ತಲಿದೆ. ಆದರೆ ಇಂಥ ಬುದ್ಧಿಯ ಪ್ರಯೋಜನವಾದರೂ ಏನು? ಎಲ್ಲರೂ ಸರಕಾರದ ನಾಯಿ, ಸರಕಾರದ ನಾಯಿ ಎಂದು ಕರೆದು ಹುಚ್ಚು ಹಿಡಿಸಿ ಬಿಟ್ಟಿರುವರಲ್ಲ.

ಬೀದಿಯಲ್ಲಿ ಓಡಾಡುವದೇ ಪೇಚಾಗಿದೆ ಚಿಕ್ಕ ಮಕ್ಕಳನ್ನು ಹೊಡ ಲ್ಗೊಂಡು ಮುದುಕರ ವರೆಗೂ "ಸರಕಾರದ ನಾಯಿ" ಎಂದು ಕೂಗದೆ ಇದ್ದವರಿಲ್ಲ. ಸರಕಾರೀ ಅಧಿಕಾರಿಗಳಾದರೂ ಸುಮ್ಮನಿರುವರೋ ಇಲ್ಲ 'ನಾಯಿ' ಎಂದು ಕೂಗುವದಿಲ್ಲವೇನೋ ನಿಜ ಆದರೆ ನಾಯಿಗಿಂತ ಕಡೆಯಾಗಿ ನಡೆಸಿಕೊಳ್ಳುತ್ತಿದ್ದಾರೆ. ಇದೆಲ್ಲ ನಾನು ಗೈದ ಮನೆಮು ರುಕತನದ ಫಲವಾಗಿದೆಯಲ್ಲವೇ? ಹೆಂಡತಿಯಾದರೂ ಗಂಡನೆಂಬ ಸಂಬಂಧದಿಂದಾದರೂ ನಾನು ಹೇಳಿದಂತೆ ಕೇಳಿಕೊಂಡು ನಡೆಯಬೇಡನೆ? ಕೇಳಬೇಡಿ! ಅವಳು ಕೂಡ ಎಲ್ಲ ಕೆಲಸಗಳಲ್ಲಿಯೂ ನನ್ನ ವಿರುದ್ಧವೇ ವರ್ತಿಸುವಳು. ಅಯ್ಯೋ! ನನ್ನ ಹೆಂಡತಿಯ ನೆನಪನ್ನು ತೆಗೆದುಕೊಂ ಡರೆ ತುಂಬಾ ಖೇದವಾಗುತ್ತದೆ. ಕೋಮಲ ಹೃದಯದ ಕಾಂತೆಯನ್ನು ವಿಚಾರವಿಲ್ಲದೆ ಹೊಡೆದು ಉಪವಾಸ ಕೆಡವಿದ ನನ್ನನ್ನು ನಾಯಿ ಎಂದು ಜನರು ಕರೆಯುವದೇನಾಶ್ಚರ್ಯ ? ಬರೀ ನಾಯಿಯಲ್ಲ. ಹುಚ್ಚು ನಾಯಿ! ಹೆಂಡತಿಯನ್ನು ಹೊಡೆಯುವಾಗಿನ ಸನ್ನಿವೇಶಗಳನ್ನರಿತುಕೊ ಳ್ಳಲು ವಾಚಕರು ಉತ್ಸುಕರಾಗಿರಬಹುದಲ್ಲವೇ ? ಕೇಳಿ. ನಿಮ್ಮ ಸಲು ವಾಗಿ ಕಷ್ಟಪಟ್ಟು ಉಸುರ್ಗರೆಯುವೆನು ಮಧ್ಯದಲ್ಲಿಯೇ ಕುಂಠಿತ ವಾದರೆ ಕ್ಷಮಿಸಿರಿ.

ನನ್ನ ಹೆಂಡತಿ ಒಳ್ಳೇ ಚಲುವೆ. ಬಂಗಾರ ವರ್ಣದ ಮೈಬಣ್ಣದ ಈಗ ತಾನೇ ಅರಳಿದ ಗುಲಾಬೀ ಬಣ್ಣದಂತೆ ಕಂಗೊಳಿಸುವ ತೇಜಃ ಪುಂಜ ಕಪೋಲಗಳು. ಮೈಸೂರ ತಾಂಬೂಲನ್ನು ಮೆದ್ದಂತೆ ಹವಳ ದುಟಿಗಳು. ಸಾಕು! ಎಷ್ಟು ವರ್ಣನೆ ಮಾಡಿದರೂ ಮುಗೆಯದವಳ ಸೌಂದರ್ಯದ ಮಹಿಮೆ. ನಾನೇ ನನ್ನ ಹೆಂಡತಿಯ ರೂಪವನ್ನು ವರ್ಣಿಸಿದರೆ ನಕ್ಕು ಬಿಟ್ಟೀರಿ. ಸುರೂಪಿಯಿದ್ದಂತೆ ಸುಗುಣಿಯೂ ಇದ್ದಳು. ಸಾರಾಸಾರ ವಿಚಾರಗಳಲ್ಲಿ ನುರಿತವಳು. ಒಳ್ಳೇ ಕರು ಣಾಳು ಹೃದಯ ಆಕೆಯದು. ನಾನು ಬಡವರನ್ನು ಪೀಡಿಸುತ್ತಿದ್ದೆ. ಅವಳು ಪ್ರೀತಿಸುತ್ತಿದ್ದಳು. ನಾನು ಭೋಗವೃತ್ತಿಯವನು. ಅವಳು ಇಷ್ಟೆ ನಮ್ಮಿಬ್ಬರಲ್ಲಿಯ ವೈಷಮ್ಯ. ಇದಕ್ಕಾಗಿಯೇ ನಮ್ಮಿಬ್ಬರಲ್ಲಿಯೂ ಕಲಹ. ನನ್ನ ದುರಾಗ್ರಹತನವನ್ನು ಸಾಧಿಸುವದಕ್ಕಾಗಿ ಅವಳನ್ನು

ಅನೇಕ ಸಲ ಬಾಸಾಳು ಮೂಡುವಂತೆ ಹೊಡೆದಿರುವೆನು. ಆದರೂ ಅವಳು ಬೇರೆಯವರ ಮುಂದೆ ಈ ವಿಷಯವನ್ನು ಪಿಟ್ಟೆಂದು ಒಡೆ ನುಡಿದಿಲ್ಲ

* * * *

ಒಂದು ದಿನ ಮಧ್ಯಾಹ್ನ ೧೧ ಗಂಟೆಗೆ ಖಾದೀ ಮಾರುವವನೊಬ್ಬನು ನಮ್ಮ ಮನೆಗೆ ಬಂದ. ನಾನು ಮನೆಯಲ್ಲಿರಲಿಲ್ಲ “ ಖಾದಿ ಬೇಕೆಸಮ್ಮ ' ಎಂದು ನನ್ನ ಹೆಂಡತಿಯನ್ನು ಕೇಳಿದ. ಅವಳಿಗೆ ಖಾದಿಯೆಂದರೆ ಬಹಳ ಆದರ ನನ್ನ ಬೆಸರಿಕೆಗೆ ಸುಮ್ಮನಿರುತ್ತಿದ್ದಳು- ಇಂದು ನಾನಿಲ್ಲದ ಮೂಲಕ ಅವಳಿಗೆ ಅಸುವು ದೊರೆಯಿತೋ ಏನೊ, ಖಾದೀ ಮಾರುವವನನ್ನು ಆದರದಿಂದ ಬರಮಾಡಿಕೊಂಡಳು. ಒಂದರಡು ರೂಪಾಯಿಗಳ ಖಾದೀ ಒಟ್ಟೆಯನ್ನಾದರೂ ಕೊಂಡಳು.

‘ ಅಮ್ಮಾ ನಾನು ಪರಸ್ಥಳದವನು ಮಧ್ಯಾಹ್ನದ ಊಟವನ್ನೊಂದು ನಿಮ್ಮಲ್ಲಿ ಹಾಕುವಿರಾ ’ ಎಂದು ವಿನಯಪೂರ್ವಕವಾಗಿ ಆ ಖಾದಿಯವನು ಬೇಡಿಕೊಂಡ.

“ ಯಾಕಾಗಬೊಲ್ಲದು. ಕಾಲು ತೊಳೆಯಲು ನೀರು ತಂದು ಕೊಡುತ್ತೇನೆ. ಕುಳಿತುಕೊಳ್ಳಿರಿ ’ ಎಂದು ನನ್ನಾಕೆ ಹೇಳುತ್ತಿರುವ ಸ್ವರಲ್ಲಿಯೇ ರುದ್ರಾವತಾರವನ್ನು ಧರಿಸಿಕೊಂಡು ಮನೆಯ ಒಳಕ್ಕೆ ಬಂದೆನು. ಖಾದೀ ಉಡುಪಿನಲ್ಲಿದ್ದ ಖಾದೀ ಮಾರುವವನನ್ನು ಕಂಡು ನನಗೆ ಕೋಪ ಬಂದಿತು.

“ ಕಾಲು ತೊಳೆಯಲಿಕ್ಕ ನೀರು ತರಬೇಡ. ಕಾಲಿಗೆ ತೊಡಿಸಲು ಬೇಡಿಗಳನ್ನು ತರುವೆನು ನಿಲ್ಲು ” ಎಂದು ಕೆರಳಿದ ಸಿಂಹನಂತೆ ಹೆಂಡತಿಯ ಮೇಲೆ ಹರಿ ಹಾಯ್ದೆನು.

‘ ಪಾಪ ಯಾವ ಅಪರಾಧಕ್ಕಾಗಿ ಬೇಡೀ ತೊಡಿಸಬೇಕೆನ್ನುವಿರಿ ? ಅವರೇನು ಕಳವು ಮಾಡಿರುವರೇ ? ಹಳ್ಳಿಯ ಬಡಬಗ್ಗರು ತಯಾರಿಸಿದ ಖಾದೀ ಮಾರುವದು ಕೂಡ ಅಪರಾಧವೇ ? ’ ಎಂದು ಮರುಗುವ ದನಿಯಲ್ಲಿ ನನ್ನ ಹೆಂಡತಿ ನುಡಿದಳು. ಅದಾವುದನ್ನೂ ನಾನು ಲೆಕ್ಕಿಸಲಿಲ್ಲ

"ಹಸಿದಿದ್ದಾರೆ ಮೊದಲು ಊಟವನ್ನು ನೀಡುವೆ. ಆ ಬಳಿಕ ನಿಮ್ಮ ಇಷ್ಟ ಬಂದ ಹಾಗೆ ಮಾಡಲೊಲ್ಲಿರೇಕೆ?' ಎಂದು ಪರಿಪರಿಯಾಗಿ ನನ್ನಾಕೆ ಬೇಡಿಕೊಂಡರೂ ಕೇಳದೇ ಓಲೇಕಾರರನ್ನು ಕರೆಸಿ ಆ ಖಾದೀ ಮಾರುವವನನ್ನು ಚಾವಡಿಗೆ ಕಳಿಸಿಬಿಟ್ಟೆ. ಮರು ದಿವಸ ಆ ಖಾದೀ ಮಾರುವವನನ್ನು ಚಾವಡಿಗೆ ಕಳಿಸಿಬಿಟ್ಟೆ.

ಮರುದಿವಸ ಆ ಖಾದೀ ಮಾರುವವನನ್ನು ತಾಲೂಕ ಕಚೇರಿಗೆ ಕರೆದೊಯ್ದು ಅವನ ಹತ್ತಿರ ಕರಪತ್ರ ಸಿಕ್ಕವೆಂದು ಸುಮ್ಮನೆ ಸುಳ್ಳು ಹೇಳಿಬಿಟ್ಟೆನು ಇಷ್ಟೆಲ್ಲ ಮಾಡಿದುದು ನನ್ನ ಪ್ರತಿಷ್ಠೆಯನ್ನು ಬೆಳಸಿಕೊಳ್ಳುವದಕ್ಕಾಗಿ. ಆದರೆ 'ಸುಳ್ಳಿಗೆ ಸುಖವಿಲ್ಲವೆಂಬಂತೆ ನನ್ನ ಹಂಚಿಕೆಯಲ್ಲವೂ ಮಿಂಚಿನಂತಾಗಿ ಹೋಯಿತು. ಮಾಮಲೇದಾರರಿಗೆ ಆ ಖಾದೀ ಮಾರುವವನ ಮೇಲೆ ಪೂರ್ಣ ವಿಶ್ವಾಸ. ಅವನು ತೀರ ಬಡವನಿದ್ದು ಖಾದೀ ಮಾರುವದರಿಂದಲೇ ಹೊಟ್ಟೆ ಹೊರೆಕೊಳ್ಳುವವನೆಂಬದೂ ಅವರಿಗೆ ಚನ್ನಾಗಿ ಗೊತ್ತಿತ್ತು.

"ನಿನ್ನ ಕೈಯಲ್ಲಿ ಕರಪತ್ರಗಳನ್ನು ಯಾರು ಕೊಟ್ಟಿದ್ದರು" ಎಂದು ಮಾಮಲೇದಾರರು ಆ ಖಾದೀ ಮಾರುವವನನ್ನು ಕೇಳಿದರು

"ಸ್ವಾಮೀ, ನಾನು ಬಡವನು. ಕೇವಲ ಖಾದೀ ಉದ್ಯೋಗದ ಹೊರತು ಬೇರೆ ಯಾವ ಉದ್ಯೋಗವನ್ನು ಮಾಡುವವನಲ್ಲ. ಕರಪತ್ರದ ಸಮಾಚಾರವೊಂದೂ ಗೊತ್ತಿಲ್ಲ' ಎಂದು ನಮ್ರತೆಯಿಂದ ನುಡಿದನು.

ಮಾಮಲೇದಾರರು ಕರಪತ್ರಗಳನ್ನು ಚೆನ್ನಾಗಿ ಪರೀಕ್ಷಿಸಿದರು. ತಾರೀಖು ಕೂಡ ಒಂದು ತಿಂಗಳ ಹಿಂದಿನದಾಗಿತ್ತು. ಕೂಡಲೆ ಅವರಿಗೆ ನನ್ನ ಸುಳ್ಳು ಆರೋಪದ ಬಗ್ಗೆ ಸಂಶಯ ಬಂದಿತು. ನನ್ನ ಕಡೆಗೆ ಕಣ್ಣೆರಿಸಿ ಉಗ್ರವಾಗಿ ನೋಡತೊಡಗಿದರು.

"ನಿಜವಾಗಿ ನಿನ್ನ ಬಳಿಯಲ್ಲಿ ಈ ಪತ್ರಗಳಿದ್ದಿಲ್ಲವೇ? ಮತ್ತೊಮ್ಮೆ ಆ ಖಾದಿಯವನನ್ನು ಗರ್ಜಿಸಿ ಕೇಳಿ ನೋಡಿದರು.

"ಸ್ವಾಮೀ, ನಾನೆಂದೂ ಸುಳ್ಳಾಡಿದವನಲ್ಲ. ಬೇಕಾದರೆ ಈ ರಾಯರ ಹೆಂಡತಿಯನ್ನೇ ವಿಚಾರಿಸಬಹುದು. ಖಾದಿಯ ಹೊರತು ಬೇರೆ ಏನೂ ತಂದಿಲ್ಲ'' ಎಂದು ನುಡಿದನು.

ನನ್ನ ಹೆಂಡತಿಯನ್ನು ಕರೆಸಿ ಸುಳ್ಳು ಸಾಕ್ಷಿ ಹೇಳಿಸುವಷ್ಟು ನನಗೆ ಧೈರ್ಯವೂ ಇದ್ದಿಲ್ಲ. ಯಾಕಂದರೆ ಅವಳು ಸುಳ್ಳಾಡಿ ನನ್ನಂಥ ಹೇಸಿ ಕೆಲಸಕ್ಕೆ ಕೈಹಾಕುವವಳಲ್ಲ. ನನ್ನ ಮೋರೆ ಸ್ವಲ್ಪ ಕುಂದಿತು. ಇಳಿಮೋರೆಮಾಡಿಕೊಂಡು ನಿಂತುಬಿಟ್ಟೆನು. ಮಾಮಲೇದಾರರು ಆ ನಿರಪರಾಧೀ ಬಂಧುವನ್ನು ಬಿಟ್ಟು ಕೊಟ್ಟರು. ನನ್ನ ಮೇಲೆ ಮಾತ್ರ ಅವರು ಕೆಂಡದಂತೆ ಕಿಡಿ ಕಾರಹತ್ತಿದರು.

"ನೀವು ಹೀಗೆ ಮಾಡುವದು ಎಷ್ಟು ಮಾತ್ರವೂ ಒಳಿತಲ್ಲ. ಕಾಯ್ದೆಯನ್ನುಲ್ಲಂಘಿಸಿದವರಿಗೆ ಮಾತ್ರ ದಂಡಿಸತಕ್ಕದ್ದು. ಹೀಗೆ ಸುಳ್ಳು ಆರೋಪ ಹಾಕಿ ಬಡವರನ್ನು ಪೀಡಿಸತಕ್ಕದ್ದಲ್ಲ. ನಿಮ್ಮ ಇಂಥ ಅಸತ್ಯ ಕೃತ್ಯದಿಂದ ನೀವಿಷ್ಟೇ ಜನ ನಿಂದೆಗೆ ಗುರಿಯಾಗುವದಲ್ಲದೆ ಸರಕಾರವನ್ನು ಕೂಡ ಗುರಿ ಮಾಡುವಿರಿ" ಎಂದು ಅಧಿಕಾರಯುಕ್ತವಾಗಿ ಮಾತನಾಡಿದರು

ನಾನು ಕಲ್ಲುಗಂಬದಂತೆ ಕದಲದೆ ನಿಂತುಕೊಂಡು ಕೇಳುತ್ತಿದ್ದೆ.

«ಸರಕಾರದ ನಾಯಿಯೆಂದು ಬೀದಿಯ ಜನರೆಲ್ಲ ಹೀಯಾಳಿಸುವರೆಂದು ಮೊನ್ನೆ ನೀವು ಹೇಳುತ್ತಿದ್ದಿರಲ್ಲವೇ? ಹೀಗೆಲ್ಲ ಬಡವರನ್ನು ಪೀಡಿಸಿದವರೇ ಅನ್ನದೆಯೇನು ಮಾಡಿಯಾರು?" ಎಂದು ಮತ್ತೆ ನುಡಿದು ನನಗಪ್ಪಣೆಯನ್ನಿತ್ತರು ನಾನು ಮನೆಯ ದಾರೀ ಹಿಡಿದೆ. ಇನ್ನೂ ನನ್ನ ಮೈಸೊಕ್ಕು ಹಾಗೇ ಇದ್ದಿತು. ನನಗಾದ ಅಪಮಾನವನ್ನು ಸಹಿಸುವದಾಗಲಿಲ್ಲ ಇದಕ್ಕೆಲ್ಲ ಹೆಂಡತಿಯೇ ಕಾರಣಳಲ್ಲವೇ? ಅವಳಿಗೆ ಚೆನ್ನಾಗಿ ಕೈ ತೋರಿಸಬೇಕು ಎಂದುಕೊಂಡು ಮನೆಗೆ ವೇಗದಿಂದ ಸಾಗಿದೆನು.

"ಇಂದು ನನ್ನ ಅಪಮಾನವನ್ನು ಮಾಡಿ ಮೋಜು ನೋಡಬೇಕೆಂದು ಮಾಡಿದ್ದೆಯಾ?" ಎಂದು ನುಡಿದು ಬಲವಾಗಿ ಅವಳ ಕೆನ್ನೆಗೆ

ರಡೇಟು ಹಾಕಿದೆನು. ಮೊದಲೇ ಕೆಂಪು ಛಾಯೆಯುಳ್ಳ ಕೆನ್ನೆ! ಏಟು ಹಾಕಿದ ಬಳಿಕ ಕೇಳುವದೇನು? ರಕ್ತ ರಂಜಿತವಾಗಿ ತೋರಹತ್ತಿತು

"ನನ್ನದೇನು ತಪ್ಪು ಇದರಲ್ಲಿ. ಬಡವಸಿಗೆ ಸುಮ್ಮನೆ ಯಾತನೆ ಕೊಡಬೇಡಿರೆಂದು ನಿಮಗೆ ಸಾರಿ ಹೇಳಿರಲಿಲ್ಲವೇ?" ಎಂದು ಅವಳ ನುಡಿಯುವದು ಕೂಡ ಸರಿ ಬೀಳಲಿಲ್ಲ. ಮತ್ತೆ ಏಟು ಹಾಕಿದೆ.

"ಖಾದಿಯನ್ನೇಕೆ ಬರಮಾಡಿಕೊಂಡೆ ಹೇಳು" ಎಂದು ಗದ್ದರಿಸಿದೆ. ನನ್ನ ವಕ್ರ ದೃಷ್ಟಿಯು ಅವಳು ಕೊಂಡು ಕೊಂಡ ಖಾದೀ ಕುಪ್ಪಸದ ವಸ್ತ್ರದ ಮೇಲೆ ಹೋಯಿತು. ಅವಳಿಂದ ಅದನ್ನು ತರಿಸಿದೆ ಒಮ್ಮೆಲೆ ಅದರ ಮೇಲೇಕೆ ಕೋಪ ಬಂದಿತೋ ಅದು ಈಗ ಕೂಡ ನನಗೆ ಜ್ಞಾಪಕವಿಲ್ಲ. "ಅದನ್ನು ಒಲೆಯಲ್ಲಿ ಚಲ್ಲ ಬಿಡು" ಎಂದು ಗದ್ದರಿಸಿದೆ- ಚಲ್ಲುವದಿಲ್ಲೆಂದು ಅವಳು ಹಟವನ್ನೇ ಹಿಡಿದಳು. ನಾನೂ ಹಟ ಹಿಡಿದು ಜಯ ಸಂಪಾದಿಸಿಯೇ ಬಿಡಬೇಕೆಂದು ಸಿದ್ಧನಾದೆನು. ಉದ್ದಾಮತನದಿಂದ ಒಲೆಯಲ್ಲಿ ಎಸೆದು ಬಿಟ್ಟೆನು. ತಟ್ಟನೇ ಹೋದವಳ್ದೆ ಅವಳು ತನ್ನ ಕೈ ಸುಡಬಹುದೆಂಬ ವಿಚಾರವನ್ನು ಕೂಡ ಮಾಡದೆ ಅದನ್ನು ತೆಗೆದು ಬಿಟ್ಟಳು. ನಾನು ಸೋಲುವವನೇ? ಅವಳಿಗೆರಡು ಚೆನ್ನಾಗಿ ಗುದ್ದು ಹಾಕಿ ಮತ್ತೆ ಕಸಿದುಕೊಂಡು ಬಿಟ್ಟೆನು!

"ನೀವು ಅದನ್ನು ಸುಟ್ಟಿದ್ದೇ ಆದರೆ ಸಾಯುವವರೆಗೆ ಉಪವಾಸ ಮಾಡುವೆನು" ಅವಳು ಹೇಳಿದಳು.

ಮತ್ತಾರಿಗಾದರೂ ಇಂಥ ಬೆದರಿಕೆ ಹಾಕು" ಎಂದು ಹೇಳಿ ಅದನ್ನು ಸುಟ್ಟು ಭಸ್ಮಮಾಡಿಬಿಟ್ಟೆನು. ಹೆಂಡತಿಯಾದರೂ ತನ್ನ ಮಾತನ್ನು ಹುಸಿಹೋಗಗೊಡಲಿಲ್ಲ. ಉಪವಾಸ ವ್ರತವನ್ನು ಕೈಕೊಂಡೇ ಬಿಟ್ಟಳು. ಹೊಡೆದದ್ದಾಯಿತು, ಬಡೆದದ್ದಾಯಿತು, ಸಮಾಧಾನ ಪಡಿಸಿದ್ದಾಯಿತು. ಏನಾದರೂ ಕೇಳಲಿಲ್ಲ. ದಿನಗಳೆಯಿತು, ಎರಡು ದಿನ ಗಳೆಯಿತು, ನಡಿಸಿಯೇ ಇದ್ದಳು ತನ್ನ ವ್ರತ. ಊರಲ್ಲೆಲ್ಲ ಹುಯಿಲೆದ್ದು ಹೋಯಿತು ದಾರಿಗಾಣದೆ ಹುಚ್ಚನಂತೆ ಆದೆನು. ನಿತ್ಯವೂ ಅವಳ ಉಪವಾಸವ್ರತದಿಂದ ನನ್ನಲ್ಲಿ ಬದಲಾವಣೆಗಳಾಗತೊಡಗಿದವು.

ಇಂದು ಅವಳ ಉಪವಾಸ ವ್ರತದ ಏಳನೇ ದಿನ. ಅವಳು ಬಹಳ ಅಶಕ್ತಳಾಗಿದ್ದಾಳೆ. ಬಿದ್ದಲ್ಲಿಯೇ ಬಿದ್ದುಕೊಂಡು ರಾಮನಾಮಸ್ಮರಣೆ ನಡೆಸಿದ್ದಾಳೆ. ಇಷ್ಟರಲ್ಲಿಯೇ ನನ್ನ ಕಲ್ಲೆದೆಯು ಕರಗಿ ಹೋಗಿದ್ದಿತು. ಕನಿಕರದಿಂದ ಏನು ಮಾಡಲೆಂದು ಯೋಚಿಸುತ್ತ ನನ್ನ ಕೊಠಡಿಗೆ ಹೋಗಿ ಆರಾಮ ಖುರ್ಚಿಯ ಮೇಲೆ ಒರತಕೊಂಡೆ. ಅವಳಿಂದ ಕಸಿದುಕೊಂಡು ಸುಟ್ಟಂಥ ನಮೂನೆಯ ವಸ್ತ್ರವನ್ನು ತಂದುಕೊಟ್ಟು ಬಿಡಲಾ ಎಂದು ಯೋಚಿಸಿದೆ ಅಷ್ಟರಲ್ಲಿಯೇ ಯಾವನೋ ಒಬ್ಬ ದನಕಾಯುವ ಹುಡುಗನು ಕಿಡಕಿಯ ಹತ್ತರ ಹಾಯ್ದು ಹೋಗುವಾಗ್ಗೆ '**ದೇಶದ್ರೋಹಿ**' ಎಂದು ಕೂಗಿ ಓಡಿಹೋದನು ಇದೀಗ ನನ್ನ ಅವಸ್ಥೆಯೆಂದು ಮನದಲ್ಲಿಯೇ ನೊಂದುಕೊಂಡೆ. ಇತ್ತ ಅಧಿಕಾರಿಗಳಿಗೆ ನನ್ನ ಮೇಲೆ ಅಷ್ಟಕ್ಕಷ್ಟೇ ವಿಶ್ವಾಸ ಊರ ಜನರಂತೂ ನಾಯಿಗಿಂತ ಕಡಿಮೆ ಮಾಡಿ ಬಿಟ್ಟಿದ್ದಾರೆ. ಎಂದು ಅದೆಷ್ಟೋ ವೇಳೆ ಯೋಚಿಸಿದೆ. ಕೊನೆಗೆ ಜನರ ತಪ್ಪಲ್ಲ, ನನ್ನದೇ ತಪ್ಪೆಂದು ಮನವರಿಕೆಯಾಯಿತು. ಅಮಲದಾರರನ್ನು ಸಂತುಷ್ಟಗೊಳಿಸುವದಕ್ಕೆಂದು ಎಷ್ಟೋ ಬಡ ಬಾಂಧವರಿಂದ ಲಂಚಸೂರೆಗೊಂಡುದೆಲ್ಲವೂ ಜ್ಞಾಪಕಕ್ಕೆ ಬರತೊಡಗಿದವು. ತುಂಬಾ ನೊಂದುಕೊಂಡೆ. ಇನ್ನು ಹಾಗೆ ಅಸತ್ಯ ವರ್ತನವನ್ನು ಮಾಡಕೂಡದೆಂದು ನಿಶ್ಚಯಿಸಿಕೊಂಡು ಪೇಟೆಗೆ ಹೋದೆ ಅವಳ ಮನ ಮೆಚ್ಚುವಂಥ ಅಂದವಾದ ಖಾದೀ ಅರಿವೆಯನ್ನು ಕೊಂಡುಕೊಂಡೆ. ಅವಳ ಮುಂದಿಟ್ಟು ದೇವರಿಗೆರಗಿದಂತೆ ಸಾಷ್ಟಾಂಗ ನಮಸ್ಕಾರವನ್ನು ಹಾಕಿ ನನ್ನ ಅಪರಾಧಗಳೆಲ್ಲವನ್ನೂ ಒಪ್ಪಿಕೊಳ್ಳಲು ಅವಳಿಗೂ ಕರುಣೆ ಹುಟ್ಟಿತು. ಉಪವಾಸ ವ್ರತವನ್ನು ಬಿಡಲು ಒಪ್ಪಿಕೊಂಡಳು. ನಾನು ಪೇಟೆಯಿಂದ ಬರುವಾಗ್ಗೆ ಮೂಸಂಬೀ ಹಣ್ಣುಗಳನ್ನು ತೆಗೆದುಕೊಂಡೇ ಬಂದಿದ್ದೆ. ರಸವನ್ನು ತೆಗೆದು ಅವಳಿಗೆ ಕುಡಿಯಲು ಕೊಟ್ಟೆ. ಎದ್ದು ಕುಳಿತು ರಸವನ್ನು ಸೇವಿಸಿದಳು.

"ಸಾಕಲ್ಲವೇ" ಎಂದು ಕೇಳಿದೆ.

"ಸಾಕು" ಎಂದು, ಹರ್ಷಯುಕ್ತನಾಗಿ ನುಡಿದಳು.

ಆಹಹಾ! ಅವಳ ಮುಖದ ಮೇಲಿದ್ದ ವಿಜಯ ಕಾಂತಿಯನ್ನು ಕಂಡವರೇ ಬಲ್ಲರು. ರಾವಣನ ಯಾತನೆಯಿಂದ ಮುಕ್ತಳಾಗಿ ರಾಮನನ್ನು ಪಡೆದ ಸೀತೆಗಿಂತಲೂ ಹೆಚ್ಚಾಗಿ ಆನಂದವಾಗಿದ್ದಿತು. ಉಪವಾಸದಿಂದ ಮುಖವು ಬಾಡಿದಂತಾಗಿದ್ದರೂ ನನಗಂದು ಅಂದವಾಗಿಯೇ ಕಾಣುತ್ತಿದ್ದಿತು. ನಗೆಮಲ್ಲಿಗೆಯಂಥ ಅವಳ ಹಾಸ್ಯಮಯವಾದ ಮುಖವನ್ನು ಕಂಡು ಸುಮ್ಮನಿರುವಂತೆ ಆಗಲಿಲ್ಲ ತಟ್ಟನೆ ಬಂದು ಮುದ್ದು ಕೊಟ್ಟುಬಿಟ್ಟೆ.

“ಆಹಾ, ಈ ಮೋಸಂಬಿಯ ರಸಕ್ಕಿಂತಲೂ ಈ ರಸವು ಅಮೃತದಂತಿದೆ” ಎಂದು ಅವಳು ಸರಸವಾಡಿ ನಾಚಿಕೆಯಿಂದ ಕೆಳಗೆ ಮುಖಮಾಡಿಕೊಂಡಳು. ಅವಳ ಆ ಸರಸವು ನನಗೆ ಮತ್ತಿಷ್ಟು ಹುರುಪನ್ನು ಕೊಟ್ಟಿತು. ಲೋಹಚುಂಬಕಕ್ಕಿಂತಲೂ ಅವಳ ಮುಖಸೌಂದರ್ಯದಲ್ಲಿಯೇ ಹೆಚ್ಚಿನ ಆಕರ್ಷಣ ಶಕ್ತಿಯಿದೆಯೆಂದು ನಾನಂದು ಕಂಡುಹಿಡಿದೆ. ಅವಳ ಸೌಂದರ್ಯಚುಂಬಕವು ಚುಂಬನೆಗಾಗಿ ನನ್ನ ಮುಖವನ್ನು ತನ್ನೆಡೆಗೆ ಬರಮಾಡಿಕೊಂಡಿತು. ಹಲ್ಲಿ ಒಟಗುಟ್ಟುವಂತೆ ನಾನವಳ ಗುಲಾಬಿಗಲ್ಲದ ಮೇಲೆ ಎಷ್ಟುಸಲ ಸದ್ದನ್ನು ಮಾಡಿದೆನೋ! ನಾನರಿಯೆ ಅಮೃತಪಾನಕ್ಕಿಂತಲೂ ಸುಖಕರವಾದ ಆ ಚುಂಬನೆಗೆ ನಾನೇನೂ ಬೇಸರಿಯುವವನಲ್ಲ. ಆದರೆ ಅವಳು ಉಪವಾಸದಿಂದ ಶಕ್ತಿಹೀನಳಾದವಳೆಂದು ಅಷ್ಟಕ್ಕೇ ಸಾಕುಮಾಡಬೇಕಾಯಿತು.

ಇದೇ ಸಮಯಕ್ಕೆ ಮತ್ತಾರೋ ಹೊರಗೆ “**ದೇಶದ್ರೋಹಿ**” ಎಂದು ಕೂಗಿದಂತೆ ಕೇಳಿಸಿತು. ನನಗೀಗ ತಿಲಾಂಶದಷ್ಟೂ ಸಿಟ್ಟು ಬರಲಿಲ್ಲ. «ಅಂದುಕೊಳ್ಳಿರಿ. ನಾನೇ ನಿಮಗೆ ಪೀಡಿಸಿರದಿದ್ದರೆ ನೀವೆಲ್ಲಿ ಅನ್ನುತ್ತಿದ್ದಿರಿ” ಎಂದು ಸುಮ್ಮನಾದೆ.

ಹೆಂಡತಿಗೆ ಮಾತ್ರ ಕೋಪ ಬಂದಿತು. ‘ಎಲೋ ಯಾರು ಎಂದು ಕೂಗುವವಳಿದ್ದಳು. ಆದರೆ ಅಷ್ಟೊಂದು ಶಕ್ತಿ ಬೇಕಲ್ಲ ಕೂಗಲಿಕ್ಕೆ; ಸುಮ್ಮನಾದಳು. ನನ್ನ ಕುತ್ತಿಗೆಗೆ ತನ್ನ ಕೋಮಲವಾದ ಕರಗಳ ಮಾಲೆಯನ್ನು ಹಾಕಿ ಕನಿಕರ ದೃಷ್ಟಿಯಿಂದ ನೋಡತೊಡಗಿದಳು.

ಇದೇನು, ನಿಮ್ಮ ಅವಸ್ಥೆ ಯೆಂಬ ಭಾವವು ಅವಳ ದೃಷ್ಟಿಯಲ್ಲಿ ವ್ಯಕ್ತ ವಾಗುತ್ತಿದ್ದಿತು. ಅವಳ ಆ ನೊಂದ ಹೃದಯವನ್ನು ಕಂಡು ನಾನು ಬಹಳ ಮರುಗಿದೆನು. ನನ್ನ ಎರಡೂ ಕೈಗಳಿಂದ ಮೆತ್ತಗೆ ಅವಳನ್ನು ಅಪ್ಪಿಕೊಂಡು ಸಮಾಧಾನ ಹೇಳಿದೆನು.

'ಅಧಿಕಾರಿಗಳಲ್ಲಿ ಪ್ರತಿಷ್ಠೆಪಡಿಯಬೇಕೆಂದು ಕಂಡಕಂಡವರನ್ನೆಲ್ಲ ನಿಷ್ಕಾರಣವಾಗಿ ಪೀಡಿಸಿದ್ದೇನೆ. ಅಂದಬಳಿಕ ಜನರದೇನು ತಪ್ಪು ನಾನೇ ಇನ್ನು ಮೇಲೆ ಸನ್ಮಾರ್ಗದಿಂದ ನಡೆದರೆ ಜನರಾದರೂ ಕೆಣಕು ವದನ್ನು ಬಿಟ್ಟಾರು" ಎಂದು ಹೇಳಿ ಅವಳಿಗೆ ಸ್ವಸ್ಥವಾಗಿ ಮಲಗಿಕೊಳ್ಳ ಲಿಕ್ಕೆ ಹೇಳಿದೆ ಅವಳು ಮಲಗಿಕೊಂಡಳು. ಅವಳ ಆಯಾಸವನ್ನು ಕಡಿಮೆಮಾಡಬೇಕೆಂದು ನನಗನಿಸಿತು. ಗಾಳಿಯನ್ನಾದರೂ ಬೀಸ ಬೇಕೆಂದು ಆಟ್ಟದ ಮೇಲಿನ ಬೀಸಣಿಕೆ ತೆಗೆದುಕೊಂಡು ಬಂದು ಗಾಳೀ ಹಾಕತೊಡಗಿದೆ. ಅವಳು ನಿದ್ದೆ ಹೋದಳು. ನಾನು ಅವಳ ಮುಖ ಸೌಂದರ್ಯವನ್ನು ನೋಡುತ್ತ ಬೆಪ್ಪನಂತೆ ಕುಳಿತುಬಿಟ್ಟೆನು ನಾನು ಬೀಸುತ್ತಿರುವ ತಿಳಿಗಾಳಿಯು ಸೆಳವಿನಿಂದ ಮೆಲ್ಲಗೆ ಸುಳಿದಾಡುತ್ತಿದ್ದ ಅವಳ ಸುಳಿಗೂದಲಗಳು ಮುಖಕ್ಕೆ ಮತ್ತಿಷ್ಟು ಕಳೆಯನ್ನುಂಟುಮಾ ಡುತ್ತಿದ್ದವು. ಇಳೆಯೊಳಗೆಲ್ಲ ಸೌಂದರ್ಯದಲ್ಲಿ ಇವಳೇ ಮಿಗಿಲಾದವ ಳೆಂದು ತೋರುವದಕ್ಕಾಗಿಯೇ ಜಯ ಪತಾಕಿಯಂತೆ ಆ ಸುಳಿಗೂದಲು ಗಳು ಹಾರಾಡುತ್ತಿರಬಹುದೆಂದು ನನಗೆ ತೋರಿತು. ಮತ್ತೊಮ್ಮೆ ಮುತ್ತಿಕ್ಕಬೇಕೆಂದು ಆಶೆಯಾಯಿತು. ಯಾರಾದರೂ ಕಂಡರೆ ನಕ್ಕಾ ರೆಂದು ತಿಳಿದು ಬಾಗಿಲು ಮುಂದೆ ಮಾಡಿಕೊಂಡೆ. ಅಮೃತಪಾನ ವನ್ನು ಅದೆಷ್ಟು ಸಮಯ ಮಾಡಿದನೋ ಅರಿವೇ ಇಲ್ಲ.

—: ಓಂ ಶಾಂತಿಃ ಶಾಂತಿಃ ಶಾಂತಿಃ :—

# ನನ್ನ ಧರ್ಮ



ಮಗೂ ಗೋಪಾಲ, ಧರ್ಮಕರ್ಮಗಳನ್ನು ಬಿಡಬಾರದಪ್ಪ ನಿನ್ನಿಂದಾಗದಿದ್ದರೆ ಒಬ್ಬ ಬ್ರಾಹ್ಮಣನನ್ನಾದರೂ ಸಂಬಳ ಗೊತ್ತು ಮಾಡಿ ಪೂಜೆ ಮಾಡಲಿಕ್ಕೆ ಹೇಳು. ಮೊದಲಿನಿಂದ ನಡೆದು ಬಂದ ಸಂಪ್ರದಾಯವನ್ನು ಬಿಡಬಾರದು.

"ಅಮ್ಮಾ. ಸಂಪ್ರದಾಯವೆಂದೊಡನೆ ನನ್ನ ತಲೆ ತಿರಗುವದು ನೋಡು. ಸಂಪ್ರದಾಯವಂತೆ! ಹುರುಳಿಲ್ಲದ ಸಂಪ್ರದಾಯಗಳೇ ಬಹಳ. ಆದರಿಂದ ನಮ್ಮ ಭಾರತವು ದೈನ್ಯಾವಸ್ಥೆಗೆ ಬಂದದ್ದು. ನಾನೇನು ನಿತ್ಯವೂ ದೇವರನ್ನು ಆರಾಧಿಸುವದಿಲ್ಲೇನು? ಆರಾಧನೆಯಲ್ಲಿ ಮಗ್ನರಾಗಿರುವದನ್ನು ಬಿಟ್ಟು ನಮ್ಮ ರಾಮುಭಟ್ಟರಂತೆ ಹೂವಿನಲ್ಲಿ ನೂಲು ನುಸಿಯುಂಟೋ ಇಲ್ಲವೇ ಉಪಕರಣಗಳು ಇನ್ನೂ ಹಸಿ ಯುಂಟೋ ಎಂದು ನೋಡುವದರಲ್ಲಿಯೇ ಕಾಲಕಳೆಯಲಾ? ಇದಕ್ಕೆ ದೇವರಾರಾಧನೆ ಎನ್ನುವರೇ'

'ಸಾಕು ಬಿಡಪ್ಪಾ ಬಲು ಬುದ್ಧಿವಂತನಾದೆ- ಅದು ಹೇಗೇ ಇರ ಲೊಲ್ಲದೇಕೆ. ಎಲ್ಲ ದೇವರ ಪೂಜೆಯನ್ನು ಮಾಡುವದಿಲ್ಲೇಕೆ ನೀನು? ಬರೀ ಕೃಷ್ಣನ ಪಟವೊಂದನ್ನು ತೆಗೆದುಕೊಂಡು ಹುಚ್ಚನಂತೆ ಕುಳಿತ ರಾಯಿತೇನು? ಮಂತ್ರಬೇಡವೇ ತಂತ್ರಬೇಡವೇ"

'ಅಮ್ಮಾ ತನಗೆ ಪ್ರಿಯವಾದ ಯಾವದಾದರೊಂದು ದಿವ್ಯ ಮೂರ್ತಿಯನ್ನು ಕಣ್ಣೆದುರಿಗೆ ಇಟ್ಟುಕೊಂಡು ಭಕ್ತಿಪೂರ್ವಕವಾಗಿ ಅದರ ಸಾಕ್ಷಾತ್ಕಾರಕ್ಕಾಗಿ ಹೋರಾಡುವದು ಮೇಲೋ ಅಥವಾ ಪ್ರತಿ ಷ್ಠೆಗಾಗಿ ಜನರ ಮುಂದೆ ತಾನೊಬ್ಬ ಮಡಿವಂತ ಭಕ್ತ ಶ್ರೇಷ್ಠನೆಂದು ತೋರಿಸಿಕೊಳ್ಳುವದಕ್ಕಾಗಿ ದೊಡ್ಡ ದೊಡ್ಡ ಪೆಟ್ಟಿಗೆಗಳನ್ನು ಬಿಚ್ಚಿ

ಕೊಂಡು ರಾಶಿಗಟ್ಲೆ ದೇವರನ್ನು ಸುರವಿಕೊಂಡು ಆಡಂಬರದಿಂದ ಪೂಜೆ ಮಾಡುವದು ಶ್ರೇಷ್ಠವೋ ನೀನೇ ಹೇಳು.'

ಜ್ಞಾನಿನ ಜೊತೆಗೆ ಮಾತನಾಡುವ ಸಾಮರ್ಥ್ಯವು ನನ್ನ ಬಳಿಯಲ್ಲಿಂತೂ ಇಲ್ಲವಪ್ಪ. ಮೊದಲಿನವರೇ ಹುಚ್ಚರಿದ್ದರೇ ಇಷ್ಟೊಂದು ದೇವರನ್ನು ಮಾಡಲಿಕ್ಕೆ?'

'ತಾಯೀ, ದೇವರೊಬ್ಬನೇ ಅಲ್ಲವೇನೇ? ಚಂದ್ರಹಾಸನಿಗೆ ಸಾಲಿಗ್ರಾಮವೇ ಮುದ್ದಾಗಿ ಕಂಡದ್ದರಿಂದ ಅದನ್ನು ಪೂಜಿಸಿದನು. ಧ್ರುವ ಕುಮಾರನು ತನಗೆ ನಾರಾಯಣನು ಪ್ರಿಯವಾಗಿ ಕಂಡದ್ದರಿಂದ ಅವನನ್ನು ಸಾಕ್ಷಾತ್ಕಾರ ಮಾಡಿಕೊಂಡನು. ಮೀರಾಬಾಯಿಯು ತನಗೆ ಪ್ರಿಯನಾದ ಶ್ರೀಕೃಷ್ಣ ಪರಮಾತ್ಮನನ್ನು ಆರಾಧಿಸಿದಳು. ಇದೇ ರೀತಿ ಅನೇಕ ಭಕ್ತರು ತಮಗೆ ಪ್ರಿಯವಾಗಿ ಕಂಡ ದಿವ್ಯಮೂರ್ತಿಯ ಧ್ಯಾನಮಾಡಿ. ಸಾಕ್ಷಾತ್ಕಾರ ಪಡಿಸಿಕೊಂಡು ಅಮೃತದಂಥ ಸುಖವನ್ನು ಪಡೆದು ಕೀರ್ತಿ ಶಾಲಿಗಳಾಗಲಿಲ್ಲವೇ? ಅವರು ನಮ್ಮಂತೆ ಮಡಿ ಮೈಲಿಗೆಯೆಂಬ ಪಿಶಾಚಿಯ ಕಾಟಕ್ಕೆ ಸಿಲುಕಿ ಬರೀ ಆಡಂಬರ ತೋರಿದ್ದರೆ. ಖಂಡಿತವಾಗಿಯೂ ದೇವರನ್ನು ಕಾಣುತ್ತಿರಲಿಲ್ಲ ವ್ಯಸನದ ಪರಿವೆಯನ್ನು ಕೂಡ ಮಾಡದೆ ಅನನ್ಯ ಭಕ್ತಿಯಿಂದ ಸಮಾಧಿಸ್ಥರಾಗುತ್ತಿದ್ದರು. ಈಗಿನವರು ಸತ್ತಾಗಲಾದರೂ ಸಮಾಧಿಯನ್ನು ಹೊಂದುವರೋ ಇಲ್ಲವೋ. ಸಂದೇಹವೇ. ಯಾಕಂದರೆ ದುರಾಶೆಯಿಂದ ಭೂತ ಪಿಶಾಚಿಗಳಾಗಿ ಕುಣಿದಾಡುವರೆ ಬಹಳ. ಅದಿರಲಿ; ಈಗಿನವರಿಗಂತೂ ದೇವರ ಅರ್ಥವೇ ಗೊತ್ತಿಲ್ಲ ನೋಡು. ಮಾರೆಮ್ಮನಂತೆ ದುರ್ಗವ್ವನಂತೆ; ವೆಂಕಟರಮಣನಂತೆ, ಅಂಬಾಬಾಯಿಯಂತೆ, ಅನ್ನಪೂರ್ಣ ದೇವಿಯಂತೆ. ಬಾಣವಂತೆ, ಚೋಳಂತೆ, ಹಾವಂತೆ ಇನ್ನೂ ಸಾವಿರಾರು ದೇವರಂತೆ ಒಂದರಲ್ಲಿಯೂ ಭಕ್ತಿಯಿಲ್ಲ, ವಿಶ್ವಾಸವಿಲ್ಲ, ಮಗ್ನತೆಯಿಲ್ಲ. ಏನಾದರೂ ಬಾಧೆಯಾಯಿತೆಂದರೆ ದೇವರ ನೆನಪಾಗುವದು. ಸಂಕಟ ಕಾಲದಲ್ಲಿ ವೆಂಕಟರಮಣ! ಒಮ್ಮೆ ಒಂದು ದೇವರನ್ನು ಬೇಡಿಕೊಳ್ಳುವರು. ಸಫಲವಾಗದಂತಾಗಲು ಮತ್ತೊಂದು ದೇವರನ್ನು. ಮುಗದೊಂದು ದೇವರನ್ನು. ಕೊನೆಗೆ ಪೀರನ ಮುಂದೆ ಅಲಾವೀ ಹಬ್ಬ

ದಲ್ಲಿ ಸಕ್ಕರಿ ಬೀರುತ್ತೇನೆ, ಹುಲಿಯಾಗಿ ಕುಣಿಯುತ್ತೇನೆ ಎಂಬ ಹರಕೆ ಯನ್ನಾದರೂ ಮಾಡಿಕೊಳ್ಳಲು ಸಿದ್ಧರೇ. ಇದೀಗ ಹಿಂದೂ ಧರ್ಮದ ಉನ್ನತಿ. ನೋಡಿದಿಯಾ ದೇವಭಕ್ತಿ' ಗೋಪಾಲನು ಅದೆಷ್ಟು ವಿವ ರಿಸಿ ಹೇಳತಕ್ಕವನಿದ್ದನೋ. 'ಸಾಕು ಬಿಡಪ್ಪ ನಿನ್ನ ಲಚ್ಚರು ಕೇಳುತ್ತ ಕೂಡಲು ಸಮಯವಿಲ್ಲ. ಎಂದು ಹೇಳಿ ತಾಯಿ ಅಡಿಗೆಯ ಮನೆಯ ಕಡೆಗೆ ನಡೆದಳು.

ಎಷ್ಟು ಹೇಳಿದರೂ ತಾಯಿ ಮೊದಲಿನ ಸಂಪ್ರದಾಯದಂತೆಯೇ ನಡೆಯಬೇಕೆನ್ನುವಳು ತಿಳಿಸಿ ಹೇಳಿದ್ದೆಲ್ಲ ಬೋರ್ಕಲ್ಲ ಮೇಲೆ ನೀರು ಸುರವಿದಂತೆಯೇ ಆಗುತ್ತಿದ್ದಿತು. ಇದೇ ರೀತಿ ವಾದವಿವಾದಗಳಲ್ಲಿಯೆ ಕೆಲವು ದಿನಗಳನ್ನು ತಾಯಿ ಮಕ್ಕಳಿಬ್ಬರೂ ಕಳೆದರು "ತಮ್ಮಾ ಧರ್ಮವನ್ನು ಬಿಡಬಾರದಪ್ಪಾ' ಎಂದು ತಾಯಿ ಹೇಳಿದಾಗೆಲ್ಲ ಅಮ್ಮಾ ನಾನು ಧರ್ಮವನ್ನು ಸರ್ವಥಾ ಬಿಟ್ಟಿಲ್ಲ. ಯಾವಾಗಲೂ ನನ್ನ ಧರ್ಮ ವನ್ನು ನಾನು ಅರಿತುಕೊಂಡೇ ನಡೆಯುತ್ತೇನೆ ಎಂದು ಹೇಳುತ್ತಿದ್ದ.

ಗೋಪಾಲನು ಧಾರವಾಡ ರಾಷ್ಟ್ರೀಯ ಶಾಲೆಯಲ್ಲಿ ಕಲಿಯು ತ್ತಿದ್ದ. ಇಂಗ್ಲೀಷ ನಾಲ್ಕನೇ ಇಯತ್ತೆಯಲ್ಲಿರುವಾಗಲೇ ಅವನ ತಂದೆ ಯವರು ತೀರಿಕೊಂಡರು ಅವನ ತಂದೆ ರಾಮಾಚಾರ್ಯರು ಒಳ್ಳೇ ಕರ್ಮಠರಿದ್ದರು. ಮೊದಲೇನೋ ಅವರು ಭಟ್ಟರಿದ್ದರಂತೆ. ಈಚೆಗೆ ಪ್ರಯಾಸಬಟ್ಟು ಆಚಾರ್ಯರಾಗಿದ್ದಾರೆ. ವೈಷ್ಣವರ ಮೇಲೆ ಅವರಿಗೆ ಬಹಳ ಭಕ್ತಿ. ಸ್ವಾಮಿಗಳಿಗೆ ಹಣವನ್ನು ಕೊಟ್ಟು ಅವರು ಮುದ್ರಾ ಧಾರಣ ತಗೆದುಕೊಂಡು ವೈಷ್ಣವ ದೀಕ್ಷೆಯನ್ನು ತೆಗೆದುಕೊಂಡಿದ್ದರು. ಅವರ ಮನೆಯಲ್ಲಿ ದೊಡ್ಡದೊಂದು ದೇವರ ಚೌಕಿ. ಮೂರು ನಾಲ್ಕು ಕೃಷ್ಣಾಂಜನ ಪೆಟ್ಟಿಗೆ ತುಂಬ ದೇವರು. ಅದರಲ್ಲಿಯೂ ಸಣ್ಣ ದೇವರು ಬೇರೆ, ದೊಡ್ಡ ದೇವರು ಬೇರೆಯೆಂಬ ಭೇದ. ರಾಮಾಚಾರ್ಯರು ಸರ ಕಾರೀ ವಕೀಲರಿದ್ದರು. ಅವರಿಗೆ ನಿತ್ಯವೂ ಚಹಾ ಕಾಫಿ ಗದ್ದಲದಲ್ಲಿ ಪೂಜೆಗೆ ಸವಡು ದೊರೆಯುತ್ತಿದ್ದಿಲ್ಲವೋ ಅಥವಾ ನೌಕರದಾರರ ಪದ್ಧ ತಿಯಂತೆ ನಡೆಯಬೇಕೆಂದು ಅವರ ಇಚ್ಛೆಯೋ ಯಾರು ಬಲ್ಲರು? ಪೂಜೆಗಾಗಿ ಸಂಬಳಕೊಟ್ಟು ಒಬ್ಬ ಬ್ರಾಹ್ಮಣನನ್ನು ನೇಮಿಸಿದ್ದರು.

"ಅಪ್ಪಾ ನೀವಿಷ್ಟು ದೇವರು ಅನ್ನುತ್ತೀರಿ. ಒಂದು ದಿವಸ ವಾದರೂ ನೀವು ಪೂಜೆ ಮಾಡಿದ್ದೀರಾ?" ಗೋಪಾಲನೊಮ್ಮೆ ಕೇಳಿ ಬಿಟ್ಟ.

"ಕಚೇರಿಯ ಕೆಲಸದಲ್ಲಿ ಹೇಗೆ ಆಗಬೇಕು? ಬ್ರಾಹ್ಮಣನು ಮಾಡುತ್ತಾನಲ್ಲಾ ಯಾರಾದರೂ ಮಾಡಿದರಾಯಿತು ಎಂದು ಅವರ ತಂದೆ ನುಡಿದರು.

ಅದು ಹೇಗೆ ನಡೆಯುವದು ಯಾರು ಪೂಜೆ ಮಾಡುತ್ತಾರೋ ಅವರಿಗೆ ಪುಣ್ಯ. ಊಟ ಮಾಡಿದವರ ಹೊಟ್ಟೆಯೇ ತುಂಬುವದಲ್ಲವೇ? ಗೋಪಾಲ ಕೇಳಿದ ಈ ವಿಷಯವಾಗಿ ಗೋಪಾಲನು ಅನೇಕ ಸಲ ತಂದೆಯೊಡನೆ ಚರ್ಚಿಸುತ್ತಿದ್ದ. ದುಡ್ಡಿನ ಬಲವಿದ್ದ ಮೂಲಕ ರಾಮಾ ಚಾರ್ಯರು ದೊಡ್ಡ ದೇವಭಕ್ತರಾಗಿದ್ದರು. ಭಕ್ತರಾದದ್ದು ದೇವ ರನ್ನು ಒಲಿಸಿಕೊಳ್ಳುವದಕ್ಕಲ್ಲ. ಜನರಲ್ಲಿ ಹೆಸರನ್ನು ಪಡೆಯುವದಕ್ಕೆ ಇದೆಲ್ಲ ತಿಳಿಮನದ ಗೋಪಾಲನಿಗೆ ಸರಿಬರುತ್ತಿದ್ದಿಲ್ಲ ಗೋಪಾಲನಿಗೆ ಚಿಕ್ಕವನಿರುವಾಗಲೇ ಒಳ್ಳೇ ಪುಸ್ತಕಗಳನ್ನು ಓದುವ ಅಭ್ಯಾಸ ಬಿದ್ದಿತು. ಧ್ರುವ ಪ್ರಲ್ಹಾದ ಚಂದ್ರಹಾಸ ಮೊದಲಾದ ಅನೇಕ ಭಕ್ತ ಬಾಲಕರ ಕತೆಗಳನ್ನೆಲ್ಲ ಓದಿದ ಪುರಾಣದ ಬದನೇಕಾಯಿ ಅವನಿಗೆ ಸೇರುತ್ತಿರ ಲಿಲ್ಲ. ನುಡಿದಂತೆ ನಡೆಯುವ ಸ್ವಭಾವ ಅವನದು ಒಳ್ಳೇ ವಿಷಯ ಗಳನ್ನು ಓದಿದೊಡನೆ ಅದರೊಳಗಿನ ತಿರುಳನ್ನು ಹೀರಿಕೊಂಡು ಬಿಡು ತ್ತಿದ್ದ. ಅವನು ನಿತ್ಯವೂ ಪ್ರಗತಿಯೆಂಬ ಸೋಪಾನವನ್ನು ಏರುತ್ತಲೇ ಇದ್ದ. ಮುದ್ದಾದ ಕೃಷ್ಣನ ಪಟವೊಂದನ್ನು ಅವನು ಯಾವಾಗಲೂ ತನ್ನ ಬಳಿಯಲ್ಲಿ ಇರಿಸಿಕೊಳ್ಳುತ್ತಿದ್ದ. ಅದೇ ಅವನ ಸರ್ವಸ್ವ. ಅದೇ ಅವನ ಸೊತ್ತು. ಗೋಪಾಲನಿಗೆ ಆಡಂಬರದ ಮಡಿ ಮೈಲಿಗೆಯನ್ನು ಕಂಡರೆ ಆಗುತ್ತಿದ್ದಿಲ್ಲ ಸ್ವಚ್ಛತೆಯೇ ಶ್ರೇಷ್ಠವಾದ ಮಡಿಯೆಂದು ಅವನ ಸಿದ್ಧಾಂತ ದಿನಾಲು ಸ್ವಚ್ಛವಾಗಿ ಸೆಳೆದಂಥ ಖಾದೀ ಬಟ್ಟೆಯನ್ನು ಧರಿಸುತ್ತಿದ್ದ. ತಿಂಗಳುಗಟ್ಲೆ ನೀರನ್ನು ಕಾಣದ ಮಡಿ ಎಂಬ ಹೆಸರಿನ ಬಣ್ಣದ ವಸ್ತ್ರವನ್ನಾಗಲೀ ಧಾಬಳಿಯನ್ನಾಗಲೀ ಜೀವಹೋದರೂ

ಉಟ್ಟುಕೊಳ್ಳಲಿಕ್ಕೆ ಒಪ್ಪುತ್ತಿರಲಿಲ್ಲ. ಅಂಧವಿಶ್ವಾಸದ ಅಜ್ಞಾನಿಯಾದ ಮಾತೆಯನ್ನು ತನ್ನ ದಾರಿಗೆ ತರಲು ಅದೆಷ್ಟೋ ಯತ್ನಿಸಿದ. ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಪ್ರತಿಯೊಂದು ವಿಷಯ ದಲ್ಲಿಯೂ ನನ್ನ ಧರ್ಮದಂತೆ ನಾನು ನಡೆಯುತ್ತೇನಮ್ಮಾ ಎಂದು ಹೇಳಿ ಸುಮ್ಮನಿರುತ್ತಿದ್ದ. ಇಂಥ ಸಂಗತಿಗಳಿಗೆ ಲೆಕ್ಕವೇ ಇಲ್ಲ.

ಅಧಿಕ ಮಾಸ. ಒಂದು ದಿವಸ ಓರ್ವ ಅನಾಥ ಮುದುಕೆಯು ತನ್ನ ಎರಡು ಚಿಕ್ಕ ಮಕ್ಕಳೊಂದಿಗೆ ಭಿಕ್ಷೆಗೆ ಬಂದಳು. ದಯಾಮಯ ನಾದ ಗೋಪಾಲನು ಅವಳ ಕರುಣಕತೆಯನ್ನೆಲ್ಲ ಕೇಳಿದ. ನಿಜವಾ ಗಿಯೂ ಅವಳು ದಾನವನ್ನು ಸ್ವೀಕರಿಸಲಿಕ್ಕೆ ಪಾತ್ರಳೆಂದು ತೋರಿತು. ಸರ್‍ರನೆ ತನ್ನ ತಾಯಿಯ ಬಳಿಗೆ ಹೋದ

"ಅಮ್ಮಾ, ಭೀಮಾಚಾರ್ಯರಿಗೆ ನಾವಿಬ್ಬರೂ ಬಾಗಣಕೊಡೋ ಣವೆಂದು ಹೇಳಿದ್ದೆಯಲ್ಲವೇ ಅವರಿಗೇನು ಕಡಿಮೆ ಇದೆ. ತೆರಪಿಲ್ಲ ದಷ್ಟು ಬಾಗಣಗಳು ಬರುತ್ತವೆ. ಕರ್ಜೀಕಾಯಿಯೆಂದರೆ ಅವರಿಗೇನು ಅಪರೂಪದ ಒಡವೆಯಲ್ಲ. ಪಾಪ ಈ ಅನಾಥಳು ಹುಟ್ಟಾ ಕರ್ಜೀಕಾ ಯಿಯ ಹೆಸರನ್ನಾದರೂ ಕೇಳಿರುವಳೋ ಇಲ್ಲವೋ ದೇವರೇ ಬಲ್ಲ. ಇಂಥವಳಿಗೆ ದಾನ ಕೊಟ್ಟರೆ ಖಂಡಿತವಾಗಿ ಪುಣ್ಯ ಬರುವದು ನೋಡು' ಎಂದು ಉದಾರ ಮನಸ್ಸಿನಿಂದ ಹೇಳಿದ. ಆದರೂ ತಾಯಿಯೊಪ್ಪ ಲಿಲ್ಲ.

'ಆ ದರಿದ್ರ ರಂಡೇ ಮಗಳಿಗೆ ಕೊಟ್ಟರೇ ಪುಣ್ಯಬರುವದೇ? ಯಾವ ಜಾತಿಯವಳೋ ಯಾವ ಕೋತಿಯವಳೋ ಚಲೋ ಬ್ರಾಹ್ಮಣ ನಿಗೆ ಕೊಟ್ಟರೆ ಪುಣ್ಯವಾದರೂ ಬಂದೀತು" ಎಂದು ಗೋಪಾಲನ ತಾಯಿ ನುಡಿದಳು.

'ದರಿದ್ರ ನಾರಾಯಣನ ಸೇವೆಯ ಉದ್ದೇಶದಿಂದಲೇ ಅಲ್ಲವೇನೇ ದಾನ ಮಾಡುವದು. ಅದೆಲ್ಲವನ್ನು ಬಿಟ್ಟು ಇದ್ದುಳ್ಳವರಿಗೆ ದಾನ ವನ್ನು ಮಾಡಿ ಫಲವೇನು? ಈ ಅನಾಥಳಿಗೆ ನಾವು ದಾನ ಮಾಡಿದರೆ ಅವಳು ಸಂತುಷ್ಟಳಾಗಬಹುದಲ್ಲವೇ ?' ಎಂದು ಅದೆಷ್ಟೋ ಹೇಳಿ ವಿವ

ರಿಸಿ ನೋಡಿದ. ಎಲ್ಲವೂ ಗಾಳಿಯಲ್ಲಿ ಕಟ್ಟಿದ ಮನೆಗಳೇ. ಗೋಪಾಲನು ತಾನು ಕೊಡಬೇಕೆಂದು ಮಾಡಿದ ದಾನವನ್ನು ಮಾತ್ರ ಆ ಅನಾಥಳಿಗೇ ಕೊಟ್ಟು ನಮಸ್ಕಾರ ಮಾಡಿದ. ಎಲ್ಲರೂ ನಕ್ಕರು. ಹುಚ್ಚು ಗೋಪಾಲ ಎಂದರು. 'ನಗರಿ ನನ್ನ ಧರ್ಮದಂತೆ ನಾನು ನಡೆಯುತ್ತೇನೆ. ದೇವರು ನಿಮ್ಮ ಹಾಳು ಸಂಪ್ರದಾಯ, ಅಂಧಶ್ರದ್ಧೆ, ಕುರುಡ ಧರ್ಮವನ್ನು ಕಂಡು ನಗದೆ ಇರಲಾರನೆಂಬುದನ್ನು ಮಾತ್ರ ನೆನಪಿನಲ್ಲಿಟ್ಟು ಕೊಳ್ಳಿರಿ' ಗಂಭೀರವಾಗಿ ನಗುವವರಿಗೆಲ್ಲರಿಗೂ ಗೋಪಾಲ ಹೇಳುತ್ತಿದ್ದ. ತನ್ನ ಪವಿತ್ರ ಕಾರ್ಯಗಳಿಗೆ ಬರುವ ಯಾವ ವಿಘ್ನಗಳಿಗೂ ಬೆದರುತ್ತಿದ್ದಿಲ್ಲ.

ಗೋಪಾಲನಿಗೊಂದು ಯಾರದೋ ಮನೆಯ ಮದುವೆಯ ಆಮಂತ್ರಣ ಬಂದಿದ್ದಿತು. ಎಲ್ಲರೊಡನೆ ಊಟಕ್ಕೆ ಹೊರಟ. ದಾರಿಯಲ್ಲಿ ಕುರುಬರ ತಿಮ್ಮಣ್ಣನಿಂದು ಕೈಲಾಸ ಯಾತ್ರೆಗೆ ನಡೆದಿದ್ದ. ಗಂಟು ಬೇನೆಯೋ ಅವನನ್ನು ಕರೆದೊಯ್ಯಲಿಕ್ಕೆ ಬಂದಿತ್ತು. ಅವನ ಹೆಂಡತಿಯೂ ನಾಲ್ಕಾರು ನೆರೆಹೊರೆಯ ಸ್ತ್ರೀಯರೂ ಅಳುವಿನ ಸನಾದಿಯೊಂದಿಗೆ ಅವನನ್ನು ಕಳಿಸುವದಕ್ಕೆ ಸಿದ್ಧರಾಗಿ ಕುಳಿತಿದ್ದರು. ಗಂಡಸರು ಮಾತ್ರ ವಿಶೇಷವಿರಲಿಲ್ಲ ಗಾಬರಿಗೊಂಡು ತಿಮ್ಮಣ್ಣನ ಮಗ ಅಪ್ಪಾ ನೀವು ಮಣ್ಣು ಕೊಡುವದಕ್ಕೆ ಬನ್ನಿರೋ, ಅಣ್ಣಾ ನೀವು ಮಣ್ಣು ಕೊಡುವದಕ್ಕೆ ಬನ್ನಿರೋ, ಎಂದು ಗೋಳಿಡುತ್ತ ಅಡ್ಡಾಡುತ್ತಿದ್ದ. ಯಾರೂ ಮುಂದೆ ಬರಲೊಲ್ಲರು. ಒಂದೇ ಸವನೆ ಅಳತೊಡಗಿದ. ಗೋಪಾಲನಿದೆಲ್ಲವನ್ನೂ ಅರಿತುಕೊಂಡ. ತನ್ನ ಜೊತೆಗೆ ಊಟಕ್ಕೆ ಹೊರಟ ಗುಂಪಿನೊಳಗೆ ಯಾರೂ ಬರುವದಿಲ್ಲೆಂಬುದು ಗೊತ್ತಿತ್ತು. ಕೇಳುವಂತೆ ಕೇಳಿ ನೋಡಿದ. ಮದುವೆಯ ಪಕ್ವಾನ್ನದೂಟ ಬಿಟ್ಟು ಹೆಣ ಹೊರಲಿಕ್ಕೆ ಬರುವರೇ? ಎಲ್ಲರ ಜೊತೆಬಿಟ್ಟು, ಗೋಪಾಲನು ತಿಮ್ಮಣ್ಣನ ಶವವನ್ನು ಒಯ್ಯುವ ಕಾರ್ಯಕ್ಕೆ ಮುಖಂಡತ್ವವನ್ನು ವಹಿಸಿದ. ಗೋಪಾಲನು ಮುಂದಾಗಿ ಬರಲು ನಾಚಿಕೆಯನ್ನು ಬಿಡದಂಥ ಕೆಲವು ಜನರು ನಿರುಪಾಯರಾಗಿ ಮುಂದೆ ಬಂದರು. ಕ್ರಮದಂತೆ ಅಂತ್ಯ

ವಿಧಿಯೂ ಕೊನೆಗಂಡಿತು. ಗೋಪಾಲನಿಗೆ ಹೊಟ್ಟೆ ಹಿಡಿಸಲಾರದಷ್ಟು ಸಂತೋಷ. ಪಾಪ! ಮುಂದೆ ಮತ್ತೊಂದು ದಹನ ವಿಧಿಯನ್ನು ಮಾಡುವ ಸರತಿ ಬರುವದೆಂದು ಅವನಿಗೇನು ಗೊತ್ತು?

ನೋಣದಂಥ ನೀಚ ಕೃತ್ಯಗಳನ್ನು ಮಾಡುವವರು ಈಗಿನ ಕಾಲದಲ್ಲಿ ಅನೇಕರು ತಾವಂತೂ ಸತ್ಕಾರ್ಯಗಳನ್ನು ಮಾಡುವಂತಿಲ್ಲ ಸತ್ಕಾರ್ಯ ಮಾಡುವಂತವರ ಮೇಲೆಯೂ ಕಲ್ಲು ಎಸೆಯುವದೇ ಗೋಪಾಲನ ವಿಷಯವಾಗಿ ಮನಬಂದಂತೆ ದೂರು ಹೇಳುಬಿಟ್ಟರು 'ಹುಚ್ಚು ಹಿಡಿಯಿತು ನಿಮ್ಮ ಗೋಪಾಲನು ಕುರುಬರ ಹೆಣ ಹೊರಲಿಕ್ಕೆ ಹೋದನು. ಹಾಗೆ ಮಾಡಿದನು ಹೀಗೆ ಮಾಡಿದನು ಎಂದು ಬಗೆ ಬಗೆಯಾಗಿ ಹೇಳಿ ಅವನ ಮನಸ್ತಾಪವನ್ನು ಮಾಡಿಬಿಟ್ಟರು ಕರ್ಮಠ ಜನರ ನಿಂದೆಗೆ ಗುರಿಯಾಗಿ ಇರುವದು ಅಂಧಶ್ರದ್ಧೆಗೆ ತಾಯಿಗೆ ಸಹ ಬೀಳುತ್ತಿರಲಿಲ್ಲ ಅವಳು ಬೇಸತ್ತು ಹೋಗಿದ್ದಳು ಇಂದಿನ ಘಟನೆಯಂತೂ ಅವಳ ತಲೆ ತಿರುಗಿಸಿಬಿಟ್ಟಿತು ಅವಳು ಗೋಪಾಲಕೃಷ್ಣನ ಪಟವೊಂದನ್ನು ಬಿಟ್ಟು ಉಳಿದ ಎಲ್ಲ ದೇವರ ಪೆಟ್ಟಿಗೆಗಳನ್ನು ಕಟ್ಟಿಕೊಂಡು ಸಮೀಪವಲ್ಲಿಯೇ ಇದ್ದ ಕೆರೆಗೆ ನಡೆದಳು ಆಳನಾದ ಸ್ಥಾನವನ್ನು ನೋಡಿ ಹಾರಿಕೊಂಡು ಸತ್ತಳು

ತಿಮ್ಮಣ್ಣನ ದಹನ ಕಾರ್ಯದಿಂದ ಮುಕ್ತನಾಗಿ ಗೋಪಾಲ ಮನೆಗೆ ಹೊರಟ ಅವನಿಗೆ ಒಳ್ಳೇ ಹಸಿವೆ ಹೊಟ್ಟೆಯಲ್ಲಿ ಡಂಬರಾಟವು ನಡೆದಿತ್ತು ತಾಯಿಯನ್ನು ಕೂಗುತ್ತ ಮನೆಗೆ ಬಂದ ತಾಯಿಯ ಸುಳಿವಿರಲಿಲ್ಲ ಪೂಜೆಗೆ ಕುಳಿತಿರಬಹುದೆಂದು ದೇವರ ಚೌಕಿಯ ಹತ್ತರ ಹೋದ ದೇವರ ಪೆಟ್ಟಿಗೆಗಳೂ ಇರಲಿಲ್ಲ ತನ್ನ ಅಕ್ಕರೆಯ ಕೃಷ್ಣನ ಪಟವೊಂದಿದ್ದಿತು ದೇವಾ ಕೃಷ್ಣಾ ನನ್ನ ತಾಯಿಯು ನನ್ನನ್ನು ಬಿಟ್ಟು ಎಲ್ಲಿ ಹೋಗಿರಬಹುದು ಎನ್ನುತ್ತ ಕೃಷ್ಣನ ಧ್ಯಾನಮಾಡುತ್ತ ಕೈಮುಗಿದು ಕುಳಿತುಕೊಂಡ, ಅಷ್ಟರಲ್ಲಿಯೇ ಗೋಪಾಲನ ತಾಯಿ ಕೆರೆಬಿದ್ದು ಸತ್ತಳೆಂದು ಸುದ್ದಿ ಬಂದಿತು. ಗೋಪಾಲನು ಕೆರೆಯ ಕಡೆಗೆ ಧಾವಿಸಿದ ಸನಾತನಿಗಳೆಂದು ಮೆರೆಯಬೇಕೆನ್ನುವವರಾಗೂ ಅತ್ತ ಕಡೆಗೆ ಹಣ

ಹಾಕಲಿಲ್ಲ. ಗೋಪಾಲನ ಸಹಾಯಕ್ಕಾಗಿ ಊರಿಗೆ ಊರೇ ಬಂದಿತು ಒಬ್ಬಿಬ್ಬ ಸನಾತನಿಗಳೂ ಮೋಜು ನೋಡಲು ಬಂದಿದ್ದರು.

"ಹುಚ್ಚು ಹುಡುಗ ಪರೋಪಕಾರಿಯಂತೆ! ಊರ ಉಸಾಬರಿ ಏಕೆ ಬೇಕು ಇವನಿಗೆ? ಮಂಗಾಟ ಮಾಡಿ ತಾಯಿಯನ್ನು ಕೊಂದಿಟ್ಟ" ಗೋಪಾಲನಿಗೆ ಕೇಳಬೇಕೆಂಬ ಉದ್ದೇಶದಿಂದಲೊ ಏನೋ ಒಬ್ಬ ಸನಾತನಿಯು ನುಡಿದ.

ನಾನು ನನ್ನ ಧರ್ಮದಂತೆ ನಡೆದಿದ್ದೇನೆ. ಎಂಥ ಕಷ್ಟಬಂದರೂ ಮುಂದಾದರೂ ನಡೆಯುತ್ತೇನೆ ಎಂದು ಕೂಡಿದ ಜನರಲ್ಲಿ ಗೋಪಾಲ ಸಾರಿ ಹೇಳಿದ ತಾಯಿಯ ದಹನವಿಧಿ ಕೊನೆಗಂಡಿತು. ಗೋಪಾಲನು ಈ ವರೆಗೂ ನನ್ನ ಧರ್ಮವೆಂಬ ಮಂತ್ರವನ್ನು ಮಾತ್ರ ಬಿಟ್ಟಿಲ್ಲ. "ಸಮಾಜದ ಹಿತಕ್ಕಾಗಿ ಕೈಕೊಳ್ಳುವ ಕಾರ್ಯಗಳೆಲ್ಲ ನನ್ನ ಧರ್ಮವೆಂದು ಸಾರಿ ಹೇಳುತ್ತೇನೆ ಹಾಡಿದ್ದೇ ಹಾಡೋ ಕಿಸಬಾಯಿದಾಸಾ ಎಂಬಂತೆ ಹುರುಳಿಲ್ಲದ ಹುಚ್ಚು ಧರ್ಮದಲ್ಲಿಯೇ ಕುಳಿತುಕೊಳ್ಳಬೇಡಿರಿ ಜಾತಿ ಜಾತಿಗಳಲ್ಲಿ ಬಡದಾಡಬೇಡಿರಿ ಹಿಂದೂ ಧರ್ಮದ ಸಂರಕ್ಷಣೆಯೇ ಪ್ರತಿಯೊಬ್ಬ ಹಿಂದುವಿನ ಕರ್ತವ್ಯವೆಂದು ತಿಳಿದು ಏಕಮನಸ್ಸಿನಿಂದ ಹೋರಾಡಿರಿ ಸ್ವಾತಂತ್ರ್ಯಕ್ಕಾಗಿ ಕಾದಾಡಿರಿ ನಿಜವಾದ ಧರ್ಮದ ಮರ್ಮವನ್ನರಿತು ಭಾರತೀಯರೆಲ್ಲರೂ ಒಕ್ಕಟ್ಟಾಗಿ ಬಂಧು ಭಾವದಿಂದ ಇರುವೆವೆಂದು ಹಿಂದೂ ಮಾತೆಯನ್ನು ಪ್ರಾರ್ಥಿಸಿರಿ" ಎಂದು ಹೇಳುವ ಗೋಪಾಲನ ವೀರ ಸಂದೇಶವು ವಾಚಕರ ಹೃದಯವನ್ನು ಕರಗಿಸದೆ ಇರಲಾರದೆಂದು ಲೇಖಕನ ಭರವಸೆ.

—: ಓಂ ಶಾಂತಿಃ ಶಾಂತಿಃ ಶಾಂತಿಃ :—

# ಗಾಂಧೀ ಹುಚ್ಚು!

### ಅಥವಾ

## ದಂಪತಿಗಳ ದೇಶಭಕ್ತಿ

ಆಗಸಾಪುರವೆಂಬುದೊಂದು ಚಿಕ್ಕಹಳ್ಳಿ. ಭೀಮರಾಯರು ಆ ಹಳ್ಳಿಯ ಶ್ರೀಮಂತ ವರ್ಗದಲ್ಲೊಬ್ಬರು. ಇವರ ಸ್ವಂತ ಗಳಿಕೆ ಏನೂ ಇರಲಿಲ್ಲ. ಪಿತ್ರಾರ್ಜಿತ ಉತ್ಪನ್ನವೇ ವರ್ಷ ಒಂದಕ್ಕೆ ಐದಾರು ಸಾವಿರ ರೂಪಾಯಿ ಬರುತ್ತಲಿದ್ದಿತು. ಪೈಗೆ ಪೈಕೂಡಿ ಹಾಕುವದರಲ್ಲಿ ಇವರಷ್ಟು ಜಾಣರು ಎಲ್ಲಿಯೂ ಸಿಗಲಾರರು. ಇವರ ಹೆಂಡತಿಯ ಹೆಸರು ಅಂಬಕ್ಕ. ಇವಳು ಬಹಳೇ ಉದಾರಮನಸ್ಸಿನವಳು ಗಂಡನ ಮಾತು ಮೀರಿ ನಡೆಯುವದಂತೂ ಇವಳಿಗೆ ಗೊತ್ತೇ ಇರಲಿಲ್ಲ. ಇವರಿಗೆ ಶ್ಯಾಮನೆಂಬ ಒಬ್ಬನೇ ಒಬ್ಬ ಮಗ. ಇವನು ಒಳ್ಳೇ ಚುರುಕು ಬುದ್ಧಿಯ ಹುಡುಗ. ತನ್ನ ಹದಿನೆಂಟನೇ ವಯಸ್ಸಿನಲ್ಲಿಯೇ ಪ್ರೀವ್ಹಿಯುಸ್ ಪರೀಕ್ಷೆ ಪಾಸಾಗಿದ್ದ. ಚಿಕ್ಕಂದಿನಿಂದಲೂ ಬಡಬಗ್ಗರನ್ನು ಬಲು ಪ್ರೀತಿಸುತ್ತಿದ್ದ. ಬಡವರ ಗೋಳು ಕೇಳಿ ಮನಕರಗಿ ಎಷ್ಟೋ ಸಲ ತನ್ನ ಅರಿವೆ ಅಂಚಡಿಗಳನ್ನು ಕೊಟ್ಟು ತಂದೆಯಿಂದ ಮೈಮುರಿ ಹೊಡತವನ್ನಾದರೂ ತಿಂದಿದ್ದ. ಶ್ಯಾಮನಿಗೆ ತಂದೆ ತಾಯಿಗಳ ಮೇಲೆ ಬಲು ಭಕ್ತಿ. ಇವನು ಧಾರವಾಡ ಕಾಲೇಜಿನಲ್ಲಿ ಕಲಿಯುತ್ತಿದ್ದ ಧಾರವಾಡದಲ್ಲಿ ಮೇಲಿಂದ ಮೇಲೆ ಗಾಂಧೀಜನರ ವ್ಯಾಖ್ಯಾನಗಳಾಗುತ್ತಿದ್ದವು. ವ್ಯಾಖ್ಯಾನಗಳನ್ನು ಕೇಳುವ ಲವಲವಿಕೆಯಾದರೂ ಇವನಿಗೆ ಬಹಳ. ತನ್ನ ಕಾಲೇಜದ ಜೊತೆಗಾರರೊಂದಿಗೆ ಮೇಲಿಂದಮೇಲೆ ಭಾಷಣಗಳನ್ನು ಕೇಳಲಿಕ್ಕೆ ಹೋಗುತ್ತಿದ್ದ. ಆದರೆ ಕುಲುಕುಲು ನಗುತ್ತ, ಹೀಯರ್ ಹೀಯರ್ ಎಂದು ಒದರುತ್ತ, ಪಟಪಟನೆ ಚಪ್ಪಾಳೀ ಹೊಡೆಯುತ್ತ, ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಬಿಟ್ಟು ಹೋಗುವ ಕಾಲೇಜಿನ ಹುಡುಗರ ನಿರ್ಲಿಪ್ತ ಬುದ್ಧಿ

ಇವನಲ್ಲರಲಿಲ್ಲ. ದಿನದಿನಕ್ಕೆ ಇವನಲ್ಲಿ ಗಾಂಧೀ ಹುಚ್ಚು ಸೇರುತ್ತಲಿದ್ದಿತು ಚಹಕುಡಿಯುವದನ್ನೂ ಪರದೇಶಿ ಅರಿವೆಗಳನ್ನು ಧರಿಸುವದನ್ನೂ ಬಿಟ್ಟ. ಪರದೇಶೀ ಆಟಗಳಿಗಂತೂ ಶರಣುಹೊಡೆದುಬಿಟ್ಟ. ಕಾಲೇಜದ ಗೆಳೆಯರೆಲ್ಲರೂ ವಿಶ್ರಾಂತಿಯ ಕಾಲಕ್ಕೆ ಇಸ್ಪೇಟಿನಾಟವಾಡುತ್ತ ಕುಳಿತರೆ ಇವನು ರಾಟೀ ನೂಲುತ್ತ ಕೂಡ್ರಹತ್ತಿದ.

*　　*　　*　　*

ಇತ್ತ ಶ್ಯಾಮನ ತಂದೆ ಭೀಮರಾಯರು ನೇಕಹುಕಪ್ಪುದನಂತೆ ತನ್ನ ಹೆಂಡತಿಯು ಮುಂದೆ "ಶ್ಯಾಮನು ಪ್ರೀವಿಯುಸ್ ಪರೀಕ್ಷೆಯನ್ನಂತೂ ಉತ್ತೀರ್ಣನಾಗಿ ಬಿಟ್ಟ. ಇನ್ನು ಮೂರು ನಾಲ್ಕು ವರುಷಗಳಲ್ಲಿಯೇ ಬಿ ಎ ಎಲ್ ಎಲ್- ಬಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ದೊಡ್ಡ ವಕೀಲನಾಗಿ ಬಿಡುವ; ಬಳಿಕ ನಮ್ಮ ಭಾಗ್ಯಕ್ಕೆ ಎಣೆಯೇ ಇಲ್ಲ. ನಾಳೆ ಬೇಸಿಗೆಯ ರಜೆಯಲ್ಲಿ ಬಂದಾಗ ಶ್ಯಾಮನ ಲಗ್ನ ಮಾಡಿಬಿಡೋಣ ಈ ಮೊದಲೇ ವಾಸುದೇವರಾಯರು ಶ್ಯಾಮನಿಗೆ ತನ್ನ ಮಗಳನ್ನು ಕೊಟ್ಟು ಎರಡು ಸಾವಿರ ರೂಪಾಯಿ ವರದಕ್ಷಿಣೆ ಕೊಡಲು ಒಪ್ಪಿದ್ದಾರೆ ಇಷ್ಟೊಂದು ವರದಕ್ಷಿಣೆ ಕೊಡುವವರಾದರೂ ಯಾರು ಇದ್ದಾರೆ? ಎಂದು ಮೊದಲಾಗಿ ಮೇಲೆ ಹೇಳುತ್ತಿದ್ದರು

*　　*　　*　　*

ತಿರು ದಿನಗಳಲ್ಲಿಯೇ ಕಾಲೇಜಿಗೆ ಬಿಡುವಾಯಿತು ಬಿಡುವಾದೊಡನೆ ಎಷ್ಟೋ ವಿದ್ಯಾರ್ಥಿಗಳು ಟೀಪಾರ್ಟಿ, ನಾಟಕ ಸಿನೇಮಾ ಮೊದಲಾದ ಎಲ್ಲ ಕಾರ್ಯಕ್ರಮಗಳನ್ನು ವಂಗಿಸಿಕೊಂಡು, ಊರಲ್ಲಿ ಚೈನಿಯಿಂದ ಕಾಲಕಳೆಯುವದಕ್ಕಾಗಿ ಇಸ್ಪೇಟುಗಳ ಜೋಡನ್ನೂ ಕಟ್ಟು ಕ್ರಾಪುಗಳನ್ನು ಮಾಡಿಕೊಳ್ಳುವದಕ್ಕಾಗಿ ಕತ್ತಿ,[ರೇಝರ) ಸಬಕಾರ, ಹಣಿಗೆ, ಕನ್ನಡಿ ಮೊದಲಾದ ಪರದೇಶೀ ಸಾಮಾನಗಳನ್ನೂ ಕೊಂಡುಕೊಂಡು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಆದರೆ ಗಾಂಧೀಹುಚ್ಚು ಹಿಡಿದ ಶ್ಯಾಮನಿಗೆ, ಬೇಸಿಗೆಯ ಒಂದು ಒಂದೂವರಿ ತಿಂಗಳ ಬಿಡುವಿನಲ್ಲಿ ಖಾದೀ ಪ್ರಚಾರವನ್ನೂ ಸ್ವದೇಶೀ

ಸಾಮಾನುಗಳ ಪ್ರಚಾರವನ್ನೂ ಮಾಡಿ, ತಮ್ಮೂರ ಜನರಿಗೆ ಮುಳುಗಿ ಹೋದ ತಮ್ಮ ಸ್ವದೇಶೀ ಕೈಗಾರಿಕೆಗಳ ಬಗ್ಗೆ ಉತ್ತೇಜನವನ್ನು ಕೊಟ್ಟು. ತನ್ನ ಕೈಲಾದ ಮಟ್ಟಿಗೆ ರಾಷ್ಟ್ರಸೇವೆ ಮಾಡಬೇಕೆಂದು ಮನಸಿನಲ್ಲಿ ಬಂದಿತು. ಅನಂತರ ತಯೇ ಅವನು ಖಾದೀ ಭಾಂಡಾರದೊಡೆಯರಿಗೆ ಬಿನ್ನವಿಸಿಕೊಂಡು ಮುನ್ನೂರು ರೂಪಾಯಿಯ ಮಾಲನ್ನು ತೆಗೆದುಕೊಂಡು ಊರಿಗೆ ಹೊರಟ

*　　*　　*　　*

ಭೀಮರಾಯರು ಶ್ಯಾಮನ ಬರುವಿಕೆಯ ಚಿಂತೆಯನ್ನೇ ಮಾಡುತ್ತ ಪಡಸಾಲೆಯಲ್ಲಿ ಕುಳಿತಿದ್ದರು. ಅಷ್ಟರಲ್ಲಿಯೇ ಬಿಳೀ ಉಡುಪನ್ನು ಧರಿಸಿದ ಶ್ಯಾಮನು ಬಂದೇ ಬಿಟ್ಟ ಅವನ ಈ ವೇಷವನ್ನು ನೋಡಿದ ಕೂಡಲೆ ಭೀಮರಾಯರ ಪ್ರೇಮಾತುರತೆಯು ಮಾಯವಾಯಿತು ಮುಖಚರ್ಯೆಯು ಮಾರ್ಪಾಟಾಯಿತು ಕಣ್ಣುಗಳು ಕೆಂಪಾದವು ಸಿಟ್ಟಿನ ಭರದಲ್ಲಿ ಎದ್ದು ನಿಂತು "ಏನೋ ಶ್ಯಾಮಾ ಅದೇತರ ಗಂಟು?" ಎಂದು ಕೇಳುವಷ್ಟರಲ್ಲಿಯೇ " ಖಾದಿ " ಎಂದು ಶ್ಯಾಮನು ತಗ್ಗಿದ ದನಿಯಲ್ಲಿಯೇ ನುಡಿದ. ಆಗ ಭೀಮರಾಯರು ಮತ್ತಿಷ್ಟು ಕೋಪಗೊಂಡು "ಬರಬರುತ್ತ ದೊಡ್ಡವನಾದೆ. ಗಾಂಧಿಗೊಂದು ಹುಚ್ಚು ಹಿಡಿದು ತಿರುಗಾಡಹತ್ತಿದ್ದಾನೆ ನಿನಗೂ ಹಿಡಿಯಿತೇನು? ಶಾಲೆಯನ್ನು ಬಿಟ್ಟುಬಿಟ್ಟಿರುವೆಯೋ? ಎಷ್ಟು ದಿವಸವಾಯಿತು. ಈ ವ್ಯಾಪಾರ ನಡಿಸಿ? ಕತ್ತೆ ಎಂದು ಮನಬಂದಂತೆ ಬೈದರು. ಆದರೆ ಶಾಂತಮೂರ್ತಿಯಾದ ಶಾಮ ' ಅಪ್ಪಾ ಇನ್ನೂ ಶಾಲೆಯನ್ನು ಬಿಡುವಂಥ ಪ್ರಸಂಗ ಬಂದಿಲ್ಲ. ನಾನು ಶಾಲೆಯನ್ನೇನು ಬಿಟ್ಟಿಲ್ಲ. ಆದರೆ ಈ ವರ್ಷದ ಬೇಸಿಗೆಯ ಬಿಡುವಿನಲ್ಲಿ ಪ್ರತಿವರ್ಷದಂತೆ ಜೈನಿಯಲ್ಲಿ ಕಾಲಕಳೆಯದೆ ಸ್ವದೇಶಿ ಪ್ರಚಾರ ಕೆಲಸವನ್ನು ಮಾಡಬೇಕೆಂದಿದ್ದೇನೆ. ದಯವಿಟ್ಟು ನೀವು ಇದಕ್ಕೆ ಅಡ್ಡ ಬರಬೇಡಿರಿ. ' ಎಂದು ವಿನಯ ಬೆರೆತ ದನಿಯಲ್ಲಿ ಹೇಳಿದ. ಭೀಮರಾಯರು ಕೆಲವು ವೇಳೆಯ ವರೆಗೆ ಸುಮ್ಮನೆ ಕುಳಿತುಕೊಂಡು ಮನದಲ್ಲಿಯೇ ತುಸು ಹೊತ್ತು ಯೋಚಿಸಿ- ಶಾಮನಿಗೆ ಹೀಗೆ ಸಿಟ್ಟು ಮಾಡುವದರಿಂದ ಏನೂ ಪ್ರಯೋಜನವಾಗಲಿಕ್ಕಿಲ್ಲ. ಅವನ ವಿವಾಹ ಮಾಡಿ

ಬಿಟ್ಟರೆ ಸಂಸಾರದ ಬಲಿಗೆ ಬಿದ್ದು ಹುಚ್ಚು ತಾನೇ ಬಿಡುತ್ತದೆ. ಎಂದು ತಿಳಿದುಕೊಂಡು ವಾಸುದೇವರಾಯರನ್ನು ಕರೆಕಳುಹಿಸಿದರು.

ವಾಸುದೇವರಾಯರು ಸೊಲ್ಲಾಪುರದವರು. ಆದರೆ ಇತ್ತೀಚೆಗೆ ಆಗಸಾಪುರದ ಕೆಲವು ಭೂಮಿಗಳನ್ನು ಕೊಂಡುಕೊಂಡದ್ದರಿಂದ ಒಂದೆ ರಡು ವರ್ಷಗಳಿಂದ ಇಲ್ಲಿಯೇ ಬಂದು ಇದ್ದರು ಅವರ ಹೆಂಡತಿಯ ಹೆಸರು ರಾಧಾಬಾಯಿ ಇವರಿಗೆ ವಿಮಲೆಯೆಂಬ ಒಬಳೇ ಒಬ್ಬ ಮಗಳು. ಇವಳಿಗೀಗ ೧೪ ವರ್ಷದ ಪ್ರಾಯ ಇವಳು ಬಲು ಜಾಣೆ. ಚೆಲ್ವಿಕೆಯಲ್ಲಂತೂ ರತಿದೇವಿಯನ್ನು ಮೀರಿಸಿದ್ದಳು. ಇವಳು ಕನ್ನಡ ಆರು ಪುಸ್ತಕಗಳನ್ನು ಓದಿ ಮುಗಿಸಿದ್ದಳು ಮನೆಯಲ್ಲಿಯೇ ತಕ್ಕ ಮಟ್ಟಿಗೆ ಓದುಬರೆಯಲಿಕ್ಕೆ ಬರುವಷ್ಟು ಇಂಗ್ಲೀಷನ್ನಾದರೂ ಕಲಿತಿದ್ದಳು.

ನಿಜವಾದ ಮನುಷ್ಯತ್ವವುಳ್ಳ ಪ್ರತಿಯೊಬ್ಬ ಮಾನವಪ್ರಾಣಿಗೂ ಗಾಂಧೀಹುಚ್ಚು ಇರುವದು ಸ್ವಾಭಾವಿಕವಾದ ಗುಣವೇನೊ ! ಪಾಪ! ಇವಳಲ್ಲಿಯೂ ಗಾಂಧೀಹುಚ್ಚು ಸೇರಿತ್ತು ಬಡತನದಿಂದ ಬಳಲುವ ಹಿಂದೀಯರನ್ನು ಪರದಾಸ್ಯದಿಂದ ದೂರಮಾಡುವದಕ್ಕಾಗಿ ಮಹಾತ್ಮರು ಹೂಡಿದ ಶಾಂತಿಯುದ್ಧದಲ್ಲಿ ತಾನೂ ಭಾಗತೆಗೆದುಕೊಳ್ಳಬೇಕೆಂಬ ಉತ್ಸುಕತೆಯು ಇವಳಿಗೆ ಬಹಳೇ ಇತ್ತು. ಶ್ಯಾಮನ ವರ್ಣನೆಗಳನ್ನೆಲ್ಲ ಕೇಳಿದ ವಿಮಲೆಗೆ ಶ್ಯಾಮನೊಡನೆಯೆ ಲಗ್ನವಾಗಬೇಕೆಂಬ ಬಲವಾದ ಇಚ್ಛೆ.

ಇತ್ತೀಚೆಗೆ ವಾಸುದೇವರಾಯರು ಶ್ಯಾಮನಿಗೆ ಗಾಂಧೀ ಹುಚ್ಚು ಹಿಡಿದದ್ದನ್ನು ಕಂಡು ವಿಮಲೆಯನ್ನು ಮತ್ತಾವುದಾದರೂ ಬಿ. ಎ. ಎಮ್. ಎ. ಕಲಿತವರಿಗೆ ಕೊಡುತ್ತೇನೆ ಎಂದು ಹೆಂಡತಿಯ ಮುಂದೆ ಹೇಳುತ್ತಿದ್ದರು. ಇದನ್ನು ಕೇಳಿದಂದಿನಿಂದ ವಿಮಲೆಯ ಮುಖವು ಬಾಡಿ ಹೋಯಿತು. ಚಿಂತೆಯಿಂದ ಕೊರಗಿ ಕೊರಗಿ ಸಣ್ಣಾಗಹತ್ತಿದಳು. ಜ್ವರ ಬಂದು ಹಾಸಿಗೆ ಹಿಡಿದಳು. ಸರಿಯಾಗಿ ಊಟವನ್ನು ಮಾಡುವದನ್ನು ಬಿಟ್ಟು ಕೊಟ್ಟಳು. ಮಗಳ ಇಂಥ ದುಃಸ್ಥಿತಿಯನ್ನು

ಕಂಡು ತಾಯಿಯ ಜೀವ ಕಳವಳಿಸಹತ್ತಿತು. " ಮಗೂ ಏನಾಗಿದೆ ಯಮ್ಮ ಹೀಗೇಕೆ ಬೆಂದು ಬೆಂಡಾಗಿರುವೆ? ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು " ಎಂದುಮೇಲಿಂದ ಮೇಲೆ ಕೇಳುವಳು. ಆದರೆ ವಿಮಲೆಯು ಮರುಮಾತಾಡದೆ ಸುಮ್ಮನಿರುತ್ತಿದ್ದಳು.

ಒಂದು ದಿವಸ ವಿಮಲೆಯ ಗೆಳತಿಯೊಬ್ಬಳು ವಿಮಲೆಯ ಇಂಥ ಪರಿಸ್ಥಿತಿಯನ್ನು ಕೇಳಿ ಆವಳನ್ನು ಕಾಣಲಿಕ್ಕೆ ಬಂದಳು. ವಿಮಲೆಯ ತಾಯಿ ಬಾಗಿಲ ಮುಂದೆ ಮಾಡಿಕೊಂಡು ಬಟ್ಟೆ ಸೆಳೆಯಲಿಕ್ಕೆ ಕೆರೆಗೆ ಹೋಗಿದ್ದಳು. ಇವಳು ನೆಟ್ಟಗೆ ವಿಮಲೆಯು ಮಲಗಿದ ಕೋಣೆಗೆ ಹೋಗಿ " ವಿಮಲಾ! ಹೇಗಿದೆಯೇ ಪ್ರಕೃತಿ? ಚೆನ್ನಾಗಿದ್ದೀಯಾ? ಎಷ್ಟು ಸೊರಗಿದೆಯೇ? ಎಂದು ಕೇಳಿದಳು. ಸಖೀ, ನನಗೆ ಕಾಯಿಲೆಯಾಗಿಲ್ಲ; ಮನಸ್ತಾಪವಾಗಿದೆ ನನ್ನ ಮನದಿಚ್ಛೆಯನ್ನು ಬಚ್ಚಿಡದೆ ನಿನ್ನ ಮುಂದೆ ಬಿಚ್ಚಿ ಹೇಳಿಬಿಡುತ್ತೇನೆ. ನನ್ನ ತಂದೆತಾಯಿಗಳು ಶ್ಯಾಮನೊಡನೆ ನನ್ನ ಲಗ್ನಮಾಡಬೇಕೆಂದು ನಿಶ್ಚಯಿಸಿದ್ದರು ಅದರಂತೆ ನಾನು ಶ್ಯಾಮನನ್ನೇ ನನ್ನ ಪತಿ ರಾಜನೆಂದು ಭಾವಿಸಿಬಿಟ್ಟಿದ್ದೇನೆ. ಆದರೆ ಮತ್ತೆ ಈಗ ಅವರು ಬಿ. ಎ. ಎಂ. ಎ ಕಲಿತವರಿಗೆ ಕೊಡುತ್ತೇವೆಂದು ಅನ್ನಹತ್ತಿದ್ದಾರೆ ನಾನು ಶ್ಯಾಮನ ಹೊರತು ಇನ್ನಾರನ್ನೂ ಲಗ್ನಮಾಡಿಕೊಳ್ಳಲಾರೆ. ನನ್ನ ಮನಸ್ಸಿಗೆ ಸಂತಾಪವಾಗಿ ಹೋಗಿದೆ ಏನು ಮಾಡಲಿ?'' ಎಂದು ಹೇಳಿ ವಿಮಲೆಯು ನಿಟ್ಟುಸುರು ಬಿಟ್ಟಳು. ತಾಯಿಯು ಬಟ್ಟೆಯೊಗೆದುಕೊಂಡು ಮರಳಿ ಬಂದದ್ದರ ಅರಿವೇ ಇವರಿಗಿರಲಿಲ್ಲ. ಇವರಿಬ್ಬರ ಮಾತನ್ನೂ ಬಾಗಿಲಲ್ಲಿಯೇ ನಿಂತು ಕೇಳುತ್ತಿದ್ದ ವಿಮಲೆಯ ತಾಯಿಯು ಒಮ್ಮೆಲೇ ಒಳಗೆ ಬಂದು " ವಿಮಲಾ ಇದರಲ್ಲಿ ನಿನ್ನದೇನು ಕೆಟ್ಟಿತೇ? ಹೆಚ್ಚಿಗೆ ಕಲಿತವರಿಗೆ ಕೊಟ್ಟರೆ ನಿನಗೇ ಒಳಿತಲ್ಲವೇನೇ? ಸುಮ್ಮನೆ ಹಟಹಿಡಿಯಬೇಡಮ್ಮಾ!" ಎಂದು ಬುದ್ಧೀ ಹೇಳ ಹೋದಳು ಅಷ್ಟರಲ್ಲಿಯೇ ವಿಮಲೆಯು " ಅಮ್ಮಾ! ಬರೀ ತಕ್ಕೆಗಟ್ಟಲೆ ಪುಸ್ತಕಗಳನ್ನು ಓದಿದ ಎಂಮೆಗಳಿಗೆ ಮಹತ್ವವಿಲ್ಲ. ಓದಿ, ಕೇಳಿ, ತಿಳಿದು, ಅದರಂತೆ ವರ್ತಿಸುವ ರಾಷ್ಟ್ರಧುರಂಧರರಿಗೆ ಮಾತ್ರ ಮಹತ್ವವಿದೆ'' ಎಂದು ಸಂಕೋಚ

ಬೆರೆತ ದನಿಯಲ್ಲಿ ನುಡಿದು ಮುಸುಕು ಹಾಕಿಕೊಂಡು ಮಲಗಿ ಬಿಟ್ಟಳು. ತನ್ನ ಮಗಳಿಗೆ ಹೆಚ್ಚಿಗೆ ಮಾತಾಡಲಪೇಕ್ಷೆಯಿಲ್ಲೆಂದು ತಾಯಿಗೆ ಗೊತ್ತಾಯಿತು. ಮಗಳ ಇಚ್ಛೆಯ ವಿರುದ್ಧ ನಡೆದರೆ ಅವಳು ಹೀಗೆಯೇ ಕೊರಗಿ ಸಾಯತಕ್ಕವಳೆಂದು ತಿಳಿಯಿತು. ಅವಳು ತನ್ನ ಗಂಡನಿಗೆ ಏನೇನೋ ಸಮಾಧಾನ ಹೇಳಿ, ಒತ್ತಾಯ ಪಡಿಸಿ ವಿಮಲೆಯ ಮನಸ್ಸಿನಂತೆ ಶ್ಯಾಮನೊಡನೆಯೇ ವಿಮಲೆಯ ವಿವಾಹ ಮಾಡಲಿಕ್ಕೆ ಸಮ್ಮತಿ ಪಡೆದು ಕೊಂಡಳು. ಅಂದಿನಿಂದ ವಿಮಲೆಗೆ ಹಿರಿಹಿರಿ ಹಿಗ್ಗು!!

* * * *

ವಾಸುದೇವರಾಯರು ಭೀಮರಾಯರ ಕರೆಯ ಮೇರೆಗೆ ಅವರ ಮನೆಗೆ ಹೋದರು. ಗಾಂಧೀ ಹುಚ್ಚು ಬಿಡಿಸುವದಕ್ಕಾಗಿ ಶ್ಯಾಮನಿಗೆ ಏನೇನೋ ಉಪದೇಶ ಮಾಡುತ್ತ ಭೀಮರಾಯರು ಪಡಸಾಲೆಯ ಕೋಣೆಯಲ್ಲಿ ಕುಳಿತಿದ್ದರು. ವಾಸುದೇವರಾಯರು ಬಂದೊಡನೆ ಅವರನ್ನು ಆದರದಿಂದ ಬರಮಾಡಿಕೊಂಡು ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡರು ತುಸು ಹೊತ್ತು ಆದರ ಸತ್ಕಾರದ ಮಾತುಗಳಾದ ಬಳಿಕ 'ಇನ್ನಾದರೂ ಶ್ಯಾಮನು ತನ್ನ ಹುಚ್ಚಾಟಿಕೆಯನ್ನು ಬಿಟ್ಟು ಸುಖದಿಂದ ಕಾಲ ಕಳೆಯಬೇಕೆನ್ನುತ್ತಾನೋ? ಪುನಃ ಹೀಗೆಯೇ ಗಾಂಧೀ ಗಾಂಧೀ ಎನ್ನುತ್ತ ಸನ್ಯಾಸಿಯಂತೆ ತಿರುಗಾಡಬೇಕೆನ್ನುತ್ತಾನೋ" ಎಂದು ವಾಸುದೇವರಾಯರು ಕೇಳಲು "ಸಂಸಾರವು ಬೆನ್ನಿಗೆ ಹತ್ತಿತೆಂದರೆ ಹುಚ್ಚು ತಾನೇ ಬಿಟ್ಟು ಹೋಗುತ್ತದೆ. ಅದಿರಲಿ; ವಾಸುದೇವರಾವ್ ನೀವು ಹಿಂದೆ ಹೇಳಿದ ಮೇರೆಗೆ ಶ್ಯಾಮನಿಗೆ ನಿಮ್ಮ ಮಗಳನ್ನು ಕೊಡಲು ಒಪ್ಪಿಗೆ ಇರುವದಷ್ಟೇ?" ಎಂದು ಭೀಮರಾಯರು ನುಡಿದರು. "ನನ್ನ ಸಮ್ಮತಿ ಸುಟ್ಟಿತು! ವಿಮಲೆಯು ಶ್ಯಾಮನ ಹೊರ್ತು ಇನ್ನಾರನ್ನೂ ಲಗ್ನ ಮಾಡಿಕೊಳ್ಳತಕ್ಕವಳಲ್ಲೆಂದು ಪ್ರತಿಜ್ಞೆಯನ್ನೇ ಮಾಡಿಬಿಟ್ಟಿದ್ದಾಳೆ ವೈಶಾಖ ಶುದ್ಧ ಹುಣ್ಣಿವೆಯ ಮುಹೂರ್ತವಾದರೂ ಚೆನ್ನಾಗಿದೆ. ಆದರೆ ನಿಮ್ಮ ಶ್ಯಾಮನಿಗೆ ಲಗ್ನಮಾಡಿಕೊಳ್ಳುವದು ಇಷ್ಟವಿಲ್ಲವಂತಲ್ಲ? ಎಂದು ವಾಸುದೇವರಾಯರು ಕೇಳುವಷ್ಟರಲ್ಲಿಯೇ ಭೀಮರಾಯರು "ಶ್ಯಾಮನು ಹೇಳಿದಂತೆ ನಾನು ಕುಣಿಯತಕ್ಕವನಲ್ಲ. ಆರೇ

ದಿವಸಗಳುಳಿದವು. ಬೇಗನೆ ಲಗ್ನದ ಸಿದ್ಧತೆಯನ್ನು ಮಾಡಿರಿ. ಅವನ ಲಗ್ನವನ್ನು ಮಾಡಿಯೇ ತೀರುವೆನು.'' ಎಂದು ಸಿಟ್ಟಿನಿಂದ ಶ್ಯಾಮನ ಕಡೆಗೆ ನೋಡುತ್ತ ಹೇಳಿದರು. ಅದೆಷ್ಟೋ ವೇಳೆಯ ವರೆಗೆ ವಿವಾಹ ಸಂಬಂಧವಾಗಿ ಮಾತನಾಡಿ ವಾಸುದೇವರಾಯರು ಮನೆಗೆ ಹೋದರು

* * * *

ವಿವಾಹಮಾಡಿಕೊಂಡರೆ ಹೆಂಡತಿಯಿಂದ ರಾಷ್ಟ್ರಕಾರ್ಯಕ್ಕೆ ವಿಘ್ನ ಬರಬಹುದೆಂದು ತಿಳಿದು ಶ್ಯಾಮನು ಲಗ್ನಕ್ಕೆ ಒಪ್ಪಲೊಲ್ಲನೆಂಬುದನ್ನು ಚತುರೆಯಾದ ವಿಮಲೆಯು ತಿಳಿದುಕೊಂಡಳು. ಅವಳ ಮನಸ್ಸಿನಲ್ಲಿ ಶ್ಯಾಮನನ್ನು ಏಕಾಂತದಲ್ಲಿ ಕಂಡು ಅವನ ಮನ ಒಲಿಸಬೇಕೆಂದೂ. ತನ್ನಲ್ಲಿದ್ದ ರಾಷ್ಟ್ರಸೇವೆ ಮಾಡಬೇಕೆಂಬ ಉತ್ಸುಕತೆಯನ್ನು ಪ್ರಕಟಗೊಳಿಸಬೇಕೆಂದೂ, ಬಹಳ ಅಪೇಕ್ಷೆ ಇದ್ದಿತು. ದಿನಾಲು ಸಂಜೆಯಮುಂದೆ ಅಲ್ಲಿಯೇ ಊರ ಸಮೀಪದಲ್ಲಿದ್ದ ಗುಡ್ಡದ ಮೇಲೆ ಶ್ಯಾಮನೊಬ್ಬನೇ ಅಡ್ಡಾಡಲಿಕ್ಕೆ ಹೋಗುತ್ತಿದ್ದದನ್ನು ಚಾಣಾಕ್ಷಿಯಾದ ವಿಮಲೆಯು ಕಂಡುಹಿಡಿದಿದ್ದಳು. ಅದರಂತೆ ಒಂದು ದಿನ ವಿಮಲೆಯು ಶ್ಯಾಮನು ಅಡ್ಡಾಡಲಿಕ್ಕೆ ಹೊರಟಕೂಡಲೆ ಅವನನ್ನು ಕಾಣಿಸಿಕೊಳ್ಳದಂತೆ ಬೆನ್ನುಗುಂಟ ನಡೆದಳು ತಾನು ಹೋಗುತ್ತಿರುವದನ್ನು ಯಾರಾದರೂ ನೋಡಬಹುದಲ್ಲ! ಎಂಬುದೊಂದು ಡುಗುಡುಗಿ ಅವಳಿಗಿದ್ದಿತು. ನಿತ್ಯದಂತೆಯೇ ಶ್ಯಾಮನು ಗುಡ್ಡದ ಓರೆಯಲ್ಲಿದ್ದ ಗುಹೆಗೆ ಹೋಗಿ ಹಾಸುಗಲ್ಲಮೇಲೆ ಕುಳಿತುಕೊಂಡ. ತಂದೆತಾಯಿಗಳಿಗೆ ಎಷ್ಟು ಹೇಳಿದರೂ ಶಾಮನಿಗೆ ಒತ್ತಾಯ ಪಡಿಸಿ ಲಗ್ನ ಮಾಡಿಕೊಳ್ಳಬೇಕೆಂದು ಹಟ ಹಿಡಿದದ್ದರಿಂದ ಅವನಿಗೆ ಇದರಿಂದ ಹೇಗೆ ಪಾರಾಗಬೇಕೆಂಬುದೊಂದು ದೊಡ್ಡ ಚಿಂತೆ. ಚಿಂತಾಕ್ರಾಂತನಾಗಿ ಎರಡೂ ಕೈಗಳನ್ನು ಹಣೆಗೆ ಹಚ್ಚಿಕೊಂಡು '' ದೇವಾ! ನನ್ನ ಪ್ರಾರಬ್ಧ! ಮಾಡಿಯೇ ತೀರುವೆನೆಂದು ಹಟ ತೊಟ್ಟಿರುವರಲ್ಲ! ಇವನಿಗೆ ಗಾಂಧಿ ಹುಚ್ಚು ಹಿಡಿದಿದೆ ಹುಚ್ಚಾ! ಹುಚ್ಚಾ! ಎಂದು ಬೈಯುತ್ತಿರುವರಲ್ಲ! ವಾಸುದೇವರಾಯರ ಮಗಳಾದ ವಿಮಲೆಯೊಡನೆ ಲಗ್ನ ಮಾಡುವರಂತೆ! ಅವಳೂ ಒಬ್ಬಳು ನನಗೆ ಹುಚ್ಚ! ಹುಚ್ಚ! ಎಂದು ತುಚ್ಛಮಾಡಿ ಚುಚ್ಚಿ ಚುಚ್ಚಿ

ಮಾತನಾಡಹತ್ತಿದರೆ ನನ್ನ ಕತೆಯೇ ಮುಗಿದಂತಾಗುವದಲ್ಲ! ಮೇಲಾಗಿ ಈಗಿನ ಹುಡಿಗೆಯರು ಸುಧಾರಣೆಯ ಶಿಖರವನ್ನೇ ಮುಟ್ಟಬಿಟ್ಟಿದ್ದಾರೆ! ಬೂಟುಗಳನ್ನು ಹಾಕಿಕೊಂಡು ಮೆರೆಯುವದೇನು! ಹೆಗಲಿಗೆ ಛತ್ತ್ರಿಗೆ ಸಿಗಿಹಾಕಿಕೊಳುವದೇನು! ಕೈಯಲ್ಲಿ ರಿಸ್ಟ ವಾಚ ಕಟ್ಟಿಕೊಳ್ಳುವದೇನು ಮೈಕಾಣುವಂಥ ತೆಳ್ಳನ್ನ ಪರದೇಶೀ ಸೀರೆಯನ್ನುಟ್ಟುಕೊಂಡು ಮೋರೆಗೆ ಪರದೇಶಿ ಬೂದಿಯನ್ನು ಬಳಿದುಕೊಂಡು ಗೋಣಲ್ಲಾಡಿಸುತ್ತ ಸಡಗರದಿಂದ ಗರತಿಯರಂತೆ ಮೆರೆಯುವದೇನು! ದೇವಾ! ಇವುಗಳನ್ನೆಲ್ಲ ನೋಡಿ ನನ್ನ ಮನಸ್ಸಿಗೆ ಬಹಳೇ ತಾಪವಾಗಿಹೋಗಿದೆ ವಿಮಲೆಯೂ ಈತರವ ಸುಧಾರಿಸಿದ ಹುಡಿಗೆಯಾಗಿದ್ದ ಪಕ್ಷಕ್ಕೆ ಜನರು ನನಗೆ ಏನೆಂದು ಹೆಸರಿಟ್ಟಾರು? ನನ್ನ ಉಪದೇಶದಿಂದ ಜನರ ಮೇಲೆ ಪರಿಣಾಮವೇ ಆಗಲಿಕ್ಕಿಲ್ಲವಲ್ಲ! "ಹೆಂಡತಿ ನೋಡಿದರೆ ಪರದೇಶದಿಂದ ಇಳಿದು ಬಂದವರಂತೆ ಊರೆಲ್ಲಾ ಡೌಲು ಮಾಡುತ್ತ ಮೆರೆಯುತ್ತಾಳೆ. ಇವನು ದೊಡ್ಡ ದೇಶಭಕ್ತನಂತೆ ಉಪದೇಶ ಮಾಡಲಿಕ್ಕೆ ಬಂದಾನೆ' 'ಮೊದಲು ನಿನ್ನ ಹೆಂಡತಿಗೆ ಉಪದೇಶ ಮಾಡು ಹೋಗು' ಎಂದು ಬೈದು ನನ್ನನ್ನು ಜನರು ತುಚ್ಛ ಮಾಡಿಬಿಡಬಹುದಲ್ಲ! ಹಾ! ಪರಮೇಶ್ವರಾ! ಏನು ಮಾಡಲಿ?' ಎಂದು ದೀನಸ್ವರದಿಂದ ದೇವರನ್ನು ಬೇಡಿಕೊಳ್ಳುತ್ತ ಅಳಹತ್ತಿದ.

ಮರೆಯಲ್ಲಿಯೇ ನಿಂತು ಇದೆಲ್ಲವನ್ನೂ ನೋಡುತ್ತಿದ್ದ ವಿಮಲೆಗೆ ಶ್ಯಾಮನ ಮನದಿಚ್ಛೆಯ ಅಭಿಪ್ರಾಯವಾಯಿತು. ತನ್ನ ಬಯಕೆಯು ಪೂರ್ಣವಾಗುವದೆಂದು ತಿಳಿದು ನಸು ಧೈರ್ಯವೂ ಅವಳಿಗೆ ಬಂದಿತು. ಶ್ಯಾಮನ ಕಡುತೆರವಾದ ರೋದನವನ್ನು ಕಂಡು ಅವಳಿಗೂ ದುಃಖವಾಯಿತು ಅವನನ್ನು ಸಮಾಧಾನಪಡಿಸಬೇಕೆಂದು ಅವಸರದಿಂದ ಗುಹೆಯೊಳಗೆ ಬಂದಳು. ಬರುವಷ್ಟರಲ್ಲಿಯೇ ಶ್ಯಾಮನು ಮೂರ್ಛಿತನಾಗಿ ಬಿದ್ದುಕೊಂಡಿದ್ದ. ಕೂಡಲೆ ಅವಳು ಗುಹೆಯ ಹತ್ತರವಿದ್ದ ಹೊಂಡದಿಂದ ಒಂದು ಪರಟಿಯಲ್ಲಿ ನೀರು ತಂದು ಶ್ಯಾಮನ ಹಣೆಗೆ ಬಡಿಯಲಾರಂಭಿಸಿದಳು. ಶುಶ್ರೂಷೆ ಮಾಡುವಾಗ ಅವಳು ಒಂದೇ ಸವನೇ ಶ್ಯಾಮನ ಮೋರೆಯ ಕಡೆಗೆ ನೋಡುತ್ತಿದ್ದಳು. ಅವನ ಮೋರೆಯ

ಮೇಲೆ ಉಜ್ವಲವಾದ ರಾಷ್ಟ್ರಭಕ್ತಿಯ ತೇಜಸ್ಸು ತುಂಬಿತುಳಕುತ್ತಿತ್ತು. ದುಃಖ ಸಾಗರದಲ್ಲಿ ಮುಣುಗಿ ಕಪೋಲಗಳು ಮಲಿನವಾದಾಗ್ಯೂ ಕೆಂಪು ತಿಲಕವನ್ನಿಟ್ಟುಕೊಂಡದ್ದರಿಂದ ಆವನ ಮುಖವು ಎದ್ದು ಕಾಣುತ್ತಲಿದ್ದಿತು. ಆವನು ತಾಲೀಮು ಮಾಡಿದವನಾದ್ದರಿಂದ ಅವನ ಪುಷ್ಟವಾದ ಶರೀರವು ನೋಡುವವರಿಗೆ ಲಾಠೀ ಏಟು ಮೊದಲಾದವುಗಳನ್ನು ಸಹಿಸಲಿಕ್ಕೆ ಸಮರ್ಥವಿರುವದೆಂದು ತಿಳಿದು ಬರುವಂತಿತು ವಿಮಲೆಯು ಶ್ಯಾಮನ ಹಣೆಗೆ ನೀರು ಬಡಿಯುತ್ತ, ತನ್ನ ಸೀರೆಯ ಸೆರಗಿನಿಂದ ಅವನ ಮೋರೆಯ ಮೇಲೆ ಗಾಳಿಯನ್ನು ಬೀಸುತ್ತ ಶುಶ್ರೂಷೆ ಮಾಡುತ್ತಲೇ ಇದ್ದಳು ತುಸು ಹೊತ್ತಿನಲ್ಲಿಯೇ ಶ್ಯಾಮನಿಗೆ ನಸು ಎಚ್ಚರ ಬಂದಿತು ಎದ್ದು ಕುಳಿತ ಪಕ್ಕದಲ್ಲಿ ಯಾವಳೋ ಅಪರಿಚಿತ ಸ್ತ್ರೀ ಶ್ಯಾಮನಿಗೆ ಆಶ್ಚರ್ಯವಾಯಿತು ಬೆರಗುಗಣ್ಣುಗಳಿಂದ ಎವೆಯಿಕ್ಕದೆ ಒಂದೇ ಸವನೆ ಅವಳ ಕಡೆಗೆ ನೋಡಹತ್ತಿದ. ಅವಳುಟ್ಟ ಕರೀ ಖಾದೀ ಸೀರೆಯ ಮೇಲೆ ಎದ್ದು ಕಾಣುತ್ತಿದ್ದ ಅಚ್ಚುಗಳು ನಕ್ಷತ್ರದಂತೆ ಹೊಳೆಯುತ್ತಿದ್ದವು. ಸಂಪಿಗೆಯ ತೆನೆಯಂಥ ನಿಡುದಾದ ಮೂಗು ಕಮಲದಂಥ ಕಣ್ಣುಗಳು, ಕುಂಕುಮದ ಬೊಟ್ಟಿನಿಂದ ಕಂಗೊಳಿಸುತ್ತಿರುವ ಹರವಾದ ಹಣೆ ಇವುಗಳಿಂದ ಅವಳ ಮುಖವು ಚಂದ್ರನಂತೆ ಪ್ರಕಾಶಿಸುತ್ತಿದ್ದಿತು. ಕೈಯಲ್ಲಿ ನೀಲವರ್ಣದ ದೇಶೀ ಬಳೆಗಳನ್ನೂ ಕಾಲಲ್ಲಿ ಬೆಳ್ಳೀ ಸರಪಳಿಗಳನ್ನೂ ಇಟ್ಟುಕೊಂಡು ಮೈಯಲ್ಲಿ ಬಿಳೀ ಕುಪ್ಪುಸ ತೊಟ್ಟುಕೊಂಡಿದ್ದಳು. ತುರುಬಿನಲ್ಲಿ ತಾನೇ ತಯಾರಿಸಿದ ಒಂದು ನೂಲಿನ ಮಾಲೆಯನ್ನು ಇರಿಸಿಕೊಂಡಿದ್ದಳು. ನೋಡುವವರಿಗೆ ಆ ಮಾಲೆಯು ಮಲ್ಲಿಗೆಯ ಮಾಲೆಯೆಂದೇ ಅರಿಕೆಯಾಗುವಂತಿದ್ದಿತು. ಕೈಯಲ್ಲಿ ನೂಲುವ ತಕಲಿಯನ್ನೂ, ಮತ್ತೊಂದು ಕೈಯಲ್ಲಿ ಶ್ಯಾಮನಿಗೆ ತೋರಿಸಲು ತಂದ ತನ್ನ ಸ್ವಂತ ಲೇಖಗಳುಳ್ಳ ಮಾಸಿಕ ಪತ್ರಿಕೆಗಳನ್ನು ಹಿಡಿದಿದ್ದಳು. ಕೇತಕಿಯ ಗರಿಯಂಥ ಮೈಬಣ್ಣವುಳ್ಳ ಅವಳ ಪುಷ್ಟವಾದ ಶರೀರದಿಂದಲೂ, ಮುಖದ ಮೇಲಿದ್ದ ಉಜ್ವಲವಾದ ದೇಶಭಕ್ತಿಯ ತೇಜಸ್ಸಿನಿಂದಲೂ ಅವಳು ವೀರಸ್ತ್ರೀಯಂತೆ ಒಪ್ಪುತ್ತಿದ್ದಳು. ಶ್ಯಾಮನು ಇದನ್ನೆಲ್ಲ ನೋಡಿ ಸಾಕ್ಷಾತ್ ಭಾರತ ಮಾತೆಯೇ ತನ್ನ

ಚಿಂತೆಯನ್ನು ದೂರಗೊಳಿಸುವದಕ್ಕಾಗಿ ಬಂದಿರುವಳೋ ಎಂದು ಭಾವಿಸಿ 'ದೇವೀ ಬನ್ನಿರಿ' ಎಂದು ಮರ್ಯಾದೆಯಿಂದ ಪಕ್ಕದಲ್ಲಿಯೇ ಹಾಸುಗಲ್ಲ ಮೇಲೆ ಕುಳ್ಳಿರಿಸಿಕೊಂಡ. ಅವಳು ನಾಚಿಕೆಯಿಂದ ಕೆಳಗೆ ಮೋರೆ ಹಾಕಿಕೊಂಡು ಕುಳಿತುಕೊಂಡಳು 'ತಾವು ಯಾರು ತಮ್ಮ ಹೆಸ ರೇನು? ಇಲ್ಲಿ ಒಬ್ಬರೇ ಬಂದ ಕಾರಣವೇನು?' ಎಂದು ಶ್ಯಾಮನು ವಿನ ಯದಿಂದ ಕೇಳಿದ 'ಒಂದು ವಿಚಾರ ತಮ್ಮನ್ನು ಕೇಳಬೇಕಾಗಿದೆ ಕೇಳಲೇ?' ಎಂದು ಸಂಕೋಚದಿಂದ ನುಡಿದಳು. ಶ್ಯಾಮನು ಬೆದರು ದನಿಯಲ್ಲಿ 'ಕೇಳಬಹುದು' ಎಂದ. ಆಕೆಯು ಹೇಳತೊಡಗಿದಳು. 'ನನ್ನ ಮನದಲ್ಲಿ ಎಂದಿನಿಂದಲೂ ರಾಷ್ಟ್ರಸೇವೆ ಮಾಡುವ ಹಂಬಲ ಬಹಳ. ಆದರೆ ನಾನು ಹೆಂಗಸು. ನನ್ನ ಕೈಯಲ್ಲಿ ಸ್ವಾತಂತ್ರ್ಯವಿಲ್ಲ. ಆದರೂ ಇಲ್ಲಿಯ ವರೆಗೆ ತಂದೆ ತಾಯಿಗಳಿಗೆ ತಿಳಿಯದಂತೆ ಗೆಳತಿಯರಲ್ಲಿ ಸ್ವದೇಶೀ ಪ್ರಚಾರ ಕಾರ್ಯವನ್ನು ಮಾಡುತ್ತ ಬೇರೆಹೆಸರಿಟ್ಟು ಕೊಂಡು ರಾಟಿ, ಖಾದಿ ಇವುಗಳ ಬಗ್ಗೆ ಪತ್ರಿಕೆಗಳಲ್ಲಿ ಲೇಖಗಳನ್ನು ಕೊಡುತ್ತ ಕೈಲಾದ ಮಟ್ಟಿಗೆ ದೇಶ ಸೇವೆ ಮಾಡುತ್ತಾ ಬಂದಿದ್ದೇನೆ. ತಮ್ಮಂಥ ಪರಮಪೂಜ್ಯ ರಾಷ್ಟ್ರಭಕ್ತರ ಕೈಹಿಡಿಯುವ ಸುಸಂಧಿಯು ಒದಗಿದರೆ ಮುಂದೆ ಬಂದು ಬೇಕಾದ ಹಾಗೆ ರಾಷ್ಟ್ರ ಸೇವೆ ಮಾಡಬ ಹುದು. ಬೇರೆ ಯಾವದಾದರೂ ಹೇಡಿ ಜನರ ಇಲ್ಲವೇ ಸ್ವಾರ್ಥಿಜನರೊ ಡನೆ ಲಗ್ನವಾದರೆ ಭಾರತಮಾತೆಯ ಸೇವೆ ಮಾಡುವ ಭಾಗ್ಯವು ನನಗೆ ದೊರೆಯುವದಿಲ್ಲ ಆದುದರಿಂದ ತಾವು ನನ್ನನ್ನು ವರಿಸಬೇಕು.' ಎಂದು ಹೇಳಹೇಳುತ್ತ ಕುತ್ತಿಗೆಯ ಶಿರಬಿಗಿದು ಬಂದು ಕಣ್ಣೀರು ಸುರಿ ಸುತ್ತ ಹಾಸುಗಲ್ಲವೇಲೆ ಒರಗಿಕೊಂಡಳು. ಶ್ಯಾಮನು ತನ್ನಂತೆಯೇ ಗಾಂಧಿ ಹುಚ್ಚು ಹಿಡಿದವಳೇ ಇವಳು ಎಂದು ತಿಳಿದುಕೊಂಡ ಆದರೆ ಮಾಡುವದೇನು? ಶ್ಯಾಮನು ಅವಳನ್ನು ಸಮಾಧಾನಪಡಿಸಬೇಕೆಂದು "ದೈವಬೇಕಮ್ಮ! ಪ್ರತಿಯೊಬ್ಬ ಮನುಷ್ಯನಿಗೂ ದೇವರು ಒಂದಿ ಲ್ಲೊಂದು ಕೊರತೆಯನ್ನು ಇಟ್ಟೇ ಇಟ್ಟಿರುತ್ತಾನೆ. ನಿಮ್ಮಂತೆಯೇ ನನ್ನದಾದರೂ ಹಾಡಾಗಿದೆ ನನ್ನ ತಾಯಿ ತಂದೆಗಳು ಯಾವದೋ ವಿಮಲೆಯೊಡನೆ ವಿವಾಹ ಮಾಡುವರಂತೆ! ಅವಳು ಎಂಥ ನಡತೆ

ಯವಳೋ ಅದು ಕೂಡ ಗೊತ್ತಿಲ್ಲಮ್ಮಾ ! ಆದಕ್ಕಾಗಿಯೇ ನನಗೂ ಇಷ್ಟೊಂದು ಚಿಂತೆ. ಏನು ಮಾಡಬೇಕು ? ನಮ್ಮ ಪ್ರಾರಬ್ಧ ! ನನ್ನ ತಂದೆಯು ಹಟವನ್ನೇ ತೊಟ್ಟಿದ್ದಾನೆ. ಎಂದು ಹೇಳಿ ಅವನೂ ಕಣ್ಣೀರು ಸುರಿಸಹತ್ತಿದ.

ಶ್ಯಾಮನ ಬಯಕೆಯು ಸಂಪೂರ್ಣ ಮನವರಿಕೆಯಾದೊಡನೆ ಸೂರ್ಯನನ್ನು ಕಂಡು ಅರಳುವ ಕಮಲದಂತೆ ವಿಮಲೆಯ ಬಾಡಿದ ಮುಖವು ಅರಳಿತು. ಹಿಗ್ಗು ಹೃದಯದಲ್ಲಿ ಹಿಡಿಸದಾಯಿತು. ತಾನು ವಿಮಲೆಯೆಂಬುವನ್ನು ಶ್ಯಾಮನಿಗೆ ತಿಳಿಸಿ ಅವನನ್ನು ಸಮಾಧಾನ ಪಡಿಸುವದು ವಿಮಲೆಯ ಕೈಯಲ್ಲಿತ್ತು. ಆದರೆ ನಾಚಿಕೆಯೊಂದಿದೆಯಲ್ಲ? ತನ್ನ ಹೆಸರನ್ನು ತಾನೇ ಹೇಗೆ ಹೇಳಬೇಕು ? ತನ್ನ ಆನಂದವನ್ನು ಹೊರಗೆಡವದೆ ಸುಮ್ಮನಿದ್ದಳು. ತುಸು ಹೊತ್ತಿನ ಮೇಲೆ ಶ್ಯಾಮನನ್ನು ಸಮಾಧಾನಪಡಿಸುವದಕ್ಕೋಸ್ಕರ " ದುಃಖಿಸಬೇಡಿ! ಈ ವಿಷಯದಲ್ಲಿ ತಂದೆತಾಯಿಗಳ ಇಚ್ಛೆಯ ವಿರುದ್ಧ ಹೋಗಲೂ ಬೇಡಿ ! ಪರಮೇಶ್ವರನ ಮನಸ್ಸಿನಲ್ಲಿ ನಿಮ್ಮ ಮಾನಕ್ಕೆ ಕಲಂಕ ತರಬಾರದೆಂದಿದ್ದರೆ, ನಿಮ್ಮಿಂದ ರಾಷ್ಟ್ರಸೇವೆ ಮಾಡಿಸಿಕೊಳ್ಳಬೇಕೆಂದಿದ್ದರೆ ಆ ವಿಮಲೆಗೂ ಕೂಡ ಅವನು ಗಾಂಧೀ ಹುಚ್ಚು ಹಿಡಿಸದೆ ಎಂದಿಗೂ ಇರಲಾರನು. ನಾನಾದರೂ ಆ ಪರಮೇಶ್ವರನ ಮೇಲೆಯೇ ಭಾರ ಹಾಕಿರುವೆನು " ಎಂದು ಹೇಳಿ ಸಮಾಧಾನ ಪಡಿಸಿದಳು. ಆದರೆ ಇವನಿಗೆಲ್ಲಿಯ ನಿಜವಾದ ಸಮಾಧಾನ? ಎಷ್ಟೋ ವೇಳೆಯ ವರೆಗೆ ಚಳವಳಿಯ ಬಗ್ಗೆ ಆ ಸುದ್ದಿ ಈ ಸುದ್ದಿ ಮಾತನಾಡಿ ತಮ್ಮ ತಮ್ಮ ಮನೆಗೆ ಹೊರಟು ಹೋದರು.

* * * *

ವೈಶಾಖ ವದ್ಯ ನವಮಿಯು ಬಂದಿತು. ಅಂದೇ ಅವರ ವಿವಾಹ ದಿನ ವಿವಾಹ ಸಮಾರಂಭದ ವರ್ಣನೆಯನ್ನೇನೂ ಬೇರೆ ವರ್ಣಿಸಿ ಹೇಳಬೇಕಾಗಿಲ್ಲ. ವಾಚಕರು ಅದನ್ನು ತುಂಬಾ ಬಲ್ಲರು. ವಿವಾಹ ಕಾರ್ಯಕ್ಕೆ ಆರಂಭವಾಯಿತು. ಅಂದು ವಿಮಲೆಯು ಸಂತೋಷಸಾಗ

ರದಲ್ಲಿ ತೇಲಾಡಹತ್ತಿದಳು. ಆದರ ಶ್ಯಾಮನು ಮಾತ್ರ ದುಃಖಾಗ್ನಿಯಲ್ಲಿ ಮುಳುಗಿ ಹೋಗಿದ್ದ. ಯಾರಕಡೆಗೂ ಇವನ ಲಕ್ಷ್ಯವಿರಲಿಲ್ಲ. ನೆಲವನ್ನೇ ನೋಡುತ್ತ ಕುಳಿತಿದ್ದ. 'ಲಗ್ನದ ಶುಭಕಾರ್ಯ ನಡೆದ ವೇಳೆಯಲ್ಲಿ ದುಃಖಿಸಬಾರದಪ್ಪ ಶಾಮು ಎಂದು ಕೂಡಿದ ಜನರು ಮೇಲಿಂದ ಮೇಲೆ ಹೇಳುತ್ತಿದ್ದರು.

ಭಟ್ಟರು ಅಕ್ಕೀಕಾಳು ಎಲ್ಲರ ಕೈಯಲ್ಲಿಯೂ ಕೊಟ್ಟು ಮಂತ್ರ ಹೇಳ ಹತ್ತಿದರು. ಮಂತ್ರ ಮುಗಿಯುತ್ತಲೇ ನಡುವೆ ಹಿಡಿದ ಅಂತಃಪಟವನ್ನು ತೆಗೆದೊಡನೆ ಆಕಸ್ಮಾತ್ ಶಾಮನ ದೃಷ್ಟಿಯು ವಿಮಲೆಯ ಕಡೆಗೆ ಹೋಯಿತು. ನೋಡುತ್ತಾನೆ ನಾಲ್ಕೈದು ದಿನಗಳ ಹಿಂದೆ ಗುಹೆಯೊಳಗೆ ಬೆಟ್ಟಿಯಾದ ಪೀರ ಸ್ತ್ರೀಯೆ ಇವಳಾಗಿದ್ದಳು. ಬಟನ್ ಒತ್ತಿದೊಡನೆ ಗಪ್ಪನೆ ವಿದ್ಯುದ್ದೀಪವು ಪ್ರಕಾಶಿಸುವಂತೆ ಇವಳನ್ನು ಕಂಡೊಡನೆ ಶಾಮನ ನಿಸ್ತೇಜವಾದ ಮುಖವು ಆನಂದ ಮುದ್ರೆಯಿಂದ ಕಂಗೊಳಿಸಹತ್ತಿತು. ಬೇಗನೆ ಅವಳನ್ನು ಏಕಾಂತದಲ್ಲಿ ಕಂಡು ತನಗಾದ ಆನಂದವನ್ನು ವ್ಯಕ್ತಮಾಡಬೇಕೆಂದು ಬಲವಾದ ಅಪೇಕ್ಷೆ. ಆತುರದ ಭರದಲ್ಲಿ ಅವನ ಕೈಕಾಲುಗಳು ಕುಣಿಯಹತ್ತಿದವು. ಎಲ್ಲರಿಗೂ ಆಶ್ಚರ್ಯವಾಯಿತು. ಆಗದೇನು ಮಾಡೀತು? ಮರುದಿನ ಸಾಯಂಕಾಲ ಅದೇ ಗುಹೆಯಲ್ಲಿ ಮತ್ತೆ ಬೆಟ್ಟಿಯಾಗಬೇಕೆಂದು ಸೊನ್ನೆ ಸಂಕೇತಗಳಿಂದ ಇಬ್ಬರೂ ನಿಶ್ಚಯಿಸಿಕೊಂಡರು. ಲಗ್ನಕಾರ್ಯವು ಸುರಳಿತವಾಗಿ ಸಾಗಿತು.

*   *   *   *

ಮೊದಲೇ ನಿಶ್ಚಯಿಸಿದಂತೆ ಮರುದಿನ ಸಾಯಂಕಾಲ ಶ್ಯಾಮ ವಿಮಲೆಯರಿಬ್ಬರೂ ಬೇರೆಬೇರೆ ಹಾದಿಗಳಿಂದ ಆ ಗುಹೆಗೆ ಬಂದರು. ಶ್ಯಾಮನು ವಿಮಲೆಯನ್ನು ಅಪ್ಪಿಕೊಂಡು " ವಿಮಲೇ ನೀನೇ ಆ ವಿಮಲೆಯೆಂದು ಮೊದಲೇ ಗೊತ್ತಾಗಿದ್ದರೆ ನಮ್ಮೀರ್ವರಿಗೂ ಅಂದು ಅತ್ತು ಹಳ್ಳ ಹರಿಸುವ ಪ್ರಸಂಗವೇ ಬರುತ್ತಿದ್ದಿಲ್ಲ. ದೇವರು ದೊಡ್ಡವನಿದ್ದಾನೆ. ಅಂತೆಯೇ ನಮ್ಮೀರ್ವರ ಚಿಂತೆಯನ್ನು ದೂರ ಮಾಡಿದ್ದು

ಇನ್ನು ಮೇಲೆ ನೀನು ಮಾತ್ರ ರಾಷ್ಟ್ರಕಾರ್ಯಕ್ಕೆ ಹಿಂಜರಿಯತಕ್ಕದ್ದಲ್ಲ ನೋಡು' ಎಂದು ಹೇಳಿದ. ವಿಮಲೆಯು ನಾನೆಂದಿಗೂ ಹಿಂಜರಿಯು ಲಾರೆ. ನಿಮ್ಮ ಪ್ರತಿಯೊಂದು ಕಾರ್ಯವಲ್ಲಿಯೂ ನೆರವಾಗದೆ ಎಂದೂ ಇರಲಿಕ್ಕಿಲ್ಲ. ನನ್ನ ಜೀವದಲ್ಲಿ ಪ್ರಾಣವಿರುವ ತನಕ ಬಡವರ ಹಿತ ಕ್ಕಾಗಿ ಹೋರಾಡಲು ಸಿದ್ಧಳಿರುವೆನು" ಎಂದು ಅಭಿವಚನ ಕೊಟ್ಟಳು. ಅದೆಷ್ಟೋ ವೇಳೆಯ ವರೆಗೆ ಆವರಿಬ್ಬರೂ ಪ್ರೇಮದ ಮಾತುಕತೆಗಳನ್ನು ಆಡಿಕೊಂಡು ಮನೆಗೆ ಹೊರಟು ಹೋದರು.

ಶ್ಯಾಮನ ಬೇಸಿಗೆಯ ರಜೆಯು ಮುಗಿಯಿತು. ಶ್ಯಾಮನು ಎರಡು ಮೂರು ದಿವಸಗಳಲ್ಲಿಯೇ ಧಾರವಾಡಕ್ಕೆ ಹೋಗತಕ್ಕವನಿದ್ದ. ಅಷ್ಟರಲ್ಲಿ ಚಳವಳಿಯ ಸುದ್ದಿ ಬರಲು ತಾನೂ ಕಾಯದೇಭಂಗ ಮಾಡ ಬೇಕೆಂದು ನಿಶ್ಚಯಿಸಿದ.

ಶ್ಯಾಮನ ತಂದೆಯವರಿಗೆ ಇದೆಲ್ಲವೂ ಸಹನವಾಗಲಿಲ್ಲ. ಮಗನು ಧಾರವಾಡಕ್ಕೆ ಇಂದು ಹೋಗುತ್ತಾನೆ ನಾಳೆ ಹೋಗುತ್ತಾನೆ ಎಂದು ತಿಳಿದುಕೊಂಡೇ ಇದ್ದರು. ಶ್ಯಾಮನನ್ನು ಕರೆದು 'ಶ್ಯಾಮಾ ನಿನ್ನ ತಲೆ ತಿರುಗಿತೇನು? ಇಂಥ ಈರಾಟಿಕೆಯು ನನ್ನ ಹತ್ತಿರ ನಡೆಯಲಿಕ್ಕಿಲ್ಲ ಬೇಗನೆ ಎಲ್. ಎಲ್. ಬೀ ಪರೀಕ್ಷೆಯನ್ನು ಪಾಸಾಗಿ ವಕೀಲಿಯನ್ನು ಮಾಡುತ್ತ ಹೆಂಡತಿಯೊಡನೆ ಸುಖದಿಂದ ಕಾಲಕಳೆಯುವದನ್ನು ಬಿಟ್ಟು ಇಂಥ ಹುಚ್ಚಾಟಿಕೆಯನ್ನು ನಡೆಸಿದಿಯಾ?' ಎಂದು ಗದ್ದರಿಸಿದರು. 'ಅಪ್ಪಾ ಮುಪ್ಪಿನ ಮುದುಕನಾದ ಗಾಂಧಿಯು ಇಷ್ಟೊಂದು ಕಷ್ಟ ಬಡುತ್ತಿರುವಾಗ ತರುಣನಾದ ನನ್ನಿಂದ ಸುಮ್ಮನೆ ಕೂಡ್ರುವದು ಎಂದಿಗೂ ಆಗದು. ಹೊಟ್ಟೆ ತುಂಬಿಕೊಳ್ಳುವದೇನು? ನಾಯಿ ನರಿ ಗಳೂ ಕೂಡ ತುಂಬಿಕೊಂಡು ಸುಖವಾಗಿರುತ್ತವೆ. ಆದರೆ ಬದಕ್ಕೇನು ಮಹತ್ವವಿದೆ? ದೇಶವೆಲ್ಲ ಬಳಲಿ ಬೆಂಡಾಗಿ ಒದ್ದಾಗಿರುತ್ತಿರುವಾಗ ಸ್ವಾರ್ಥಕ್ಕೆ ಮೆಚ್ಚಿ ಅವುಗಳಂತೆಯೇ ಕೇವಲ ಪ್ರಪಂಚ ಸುಖವನ್ನು ಭೋಗಿಸುತ್ತ ಕೂಡುವದು ಮನುಷ್ಯಮಾತ್ರಕ್ಕೆ ಉಚಿತವಾದದ್ದಲ್ಲ ಎಂದು ವಿನಯ ಪೂರ್ವಕವಾಗಿ ಹೇಳಿದ.

ಅದೆಷ್ಟೋ ವೇಳೆಯ ವರೆಗೆ ವಾದವಿವಾದಗಳು ನಡೆದಿದ್ದವು. ಅಷ್ಟರಲ್ಲಿಯೇ ಪೋಲೀಸರು ಶ್ಯಾಮನ ಮೇಲೆ ವಾರಂಟು ತೆಗೆದ್ಕೊಂಡು ಬಂದರು. ಶ್ಯಾಮನು ತಂದೆ ತಾಯಿಗಳ ಚರಣಕ್ಕೆರಗಿದ. ಶ್ಯಾಮನ ತಂದೆ "ನಿನ್ನ ಫಲಭೋಗವನ್ನನುಭವಿಸು" ಎಂದು ನಿಷ್ಠುರತನದಿಂದ ಮನಸ್ಸಿಗೆ ಹತ್ತುವಂತೆ ಮಾತನಾಡಿದ. ತಾಯಿಯ ಕರುಳು ಹೆಚ್ಚಿನದೆಂಬುದನ್ನು ಯಾರಿಗೂ ಬೇರೆ ಹೇಳಬೇಕಾಗಿಲ್ಲ. ತಾಯಿಗೆ ಬಹಳೇ ಖೇದವಾಯಿತು. ಶ್ಯಾಮನಿಗೆ ಸ್ವಲ್ಪ ತಿಂಡಿಯನ್ನೂ, ತನ್ನ ಬಳಿಯಲ್ಲಿದ್ದ ೧೦ ರೂಪಾಯಿಗಳನ್ನೂ ಸಂಗಡ ಒಯ್ಯಲು ಕೊಟ್ಟು "ಕಂದಾ! ನಿನ್ನ ಮುದ್ದು ಮೊಗವನ್ನು ಎಂದು ಕಂಡೇನು? ಎಲ್ಲಿಯಾದರೂ ಗಟ್ಟಿಮುಟ್ಟಿಯಾಗಿ ಇರಪ್ಪಾ" ಎಂದು ಹರಿಕೆಯನ್ನು ಕೊಟ್ಟಳು. ವಿಮಲೆಯು ಶ್ಯಾಮನ ಪಾದಕ್ಕೆರಗಿದಳು "ಸ್ವಯಂಸೇವಕರನ್ನು ಕೂಡಿಸಿ ಭಗಿನೀ ಮಂಡಳವನ್ನು ಸ್ಥಾಪಿಸು" ಎಂದು ಹೇಳಿ ಶ್ಯಾಮನು ಪೋಲೀಸರ ವಶಕ್ಕೆ ಹೋದ. ಊರ ಜನರೆಲ್ಲರೂ ಮೆರವಣಿಗೆಯೊಂದಿಗೆ ಕಚೇರಿಗೆ ಅವನನ್ನು ಒಯ್ದು ತಲುಪಿಸಿದರು. ಮೂರನೇದಿನ ಕೋರ್ಟಿನಲ್ಲಿ ಏಳು ತಿಂಗಳ ಕಾರಾವಾಸ ಇಲ್ಲವೇ ಇನ್ನೂರು ರೂಪಾಯಿಯ ದಂಡವೆಂದು ನಿರ್ಣಯವಾಯಿತು.

*　　*　　*　　*

ಭೀಮರಾಯರು ಶ್ಯಾಮನ ಆಶೆಯನ್ನೇ ಬಿಟ್ಟು ಬಿಟ್ಟಿದ್ದರು. "ನಾವೆಂಥ ದುರ್ಭಾಗ್ಯರು? ಇದ್ದ ಒಬ್ಬ ಮಗನಿಗೆ ಚಳವಳಿಯ ಹುಚ್ಚು ಹಿಡಿದು ಹೋಯಿತು. ಚಳವಳಿಯ ಗೊಂದಲವಲ್ಲಿ ಬೀಳದೆ ದೊಡ್ಡ ವಕೀಲನಾಗಿ ಬಿಟ್ಟಿದ್ದರೆ ಲಕ್ಷಾಧೀಶರಾಗಿ ಬಿಡುತ್ತಿದ್ದೆವು. ಲಗ್ನ ಮಾಡಿದರೆ ಹುಚ್ಚು ಬಿಡಬಹುದೆಂದು ತಿಳಿದು ವ್ಯರ್ಥವಾಗಿ ಸಾವಿರಾರು. ರೂಪಾಯಿ ವೆಚ್ಚಮಾಡಿದೆ ಮೇಲಾಗಿ ಈ ಹೊಯ್ಯಾಲೆಯೊಬ್ಬಳು ಕೂಳಿಗೆ ಭಾರವಾಗಿ ನಮ್ಮ ಕೊರಳಿಗೇ ಗಂಟುಬಿದ್ದಳು." ಎಂದು ಮೇಲಿಂದ ಮೇಲೆ ಅನ್ನುತ್ತಿದ್ದರು. ಹೀಗೆ ಚುಚ್ಚಿ ಚುಚ್ಚಿ ಆಡುತ್ತಿದ ಮೊನೆಮಾತುಗಳು ಹೂವಿನಂತಹ ಅವಳ ಹೃದಯಕ್ಕೆ ನಡುತ್ತಿದ್ದವಾದರೂ ಅವಳು ಅವುಗಳನ್ನು ಶಾಂತರೀತಿಯಿಂದ ಸಹಿಸಿಕೊಳ್ಳುತ್ತಿದ್ದಳು.

ಅಂಬಕ್ಕನಿಗೆ ಮಾತ್ರ ಮಗನ ಮೇಲೆ ಬಲು ಪ್ರೇಮ. ಆವಳಿಗಿನ್ನೂ ದಂಡದ ಹಣ ತುಂಬಿ ಮಗನನ್ನು ಬಿಡಿಸಿಕೊಂಡು ಬರಬೇಕು. ಹುಡುಗ ಬುದ್ಧಿ, ತಿಳುವಳಿಕೆ ಕಡಿಮೆ, ಇನ್ನಿಷ್ಟು ಉಪದೇಶ ಮಾಡಬೇಕು. ಎಂಬ ಬಲವಾದ ಆಶೆ. ಅದರಂತೆ ಒಂದು ದಿನ ಗಂಡನು ಊಟಕ್ಕೆ ಕೂತಾಗ್ಗ ಈ ಮಾತು ತೆಗೆದಳು. ಸ್ವಲ್ಪ ಒತ್ತಾಯ ಪಡಿಸಿದ ಬಳಿಕ ಗಂಡನು ದಂಡದ ಹಣ ತುಂಬಲು ಒಪ್ಪಿದ. ಇವರ ಮಾತು ಶ್ಯಾಮನ ಹೆಂಡತಿಗೆ ಸರಿಬೀಳಲಿಲ್ಲ. 'ಅತ್ತೆಯವರೇ! ದಂಡದ ಹಣವನ್ನು ತುಂಬಿ ನನ್ನ ಪರಮ ಪೂಜ್ಯಪತಿಯ ಮಾನಕ್ಕೆ ಕಲಂಕ ತರಬೇಡಿ. ಅವರಿಗೆ ಈ ಸಂಗತಿಯು ಗೊತ್ತಾದರೆ ಅವರು ಮನೆಯಲ್ಲಿ ಕಾಲು ಸಹ ಇಡಲಿಕ್ಕಿಲ್ಲ. ಅವರೇನು ಹುಚ್ಚರಲ್ಲ. ದೇಶೋದ್ಧಾರಾರ್ಥವಾಗಿ ಸೆರೆಮನೆಗೆ ತೆರಳಿರುವರು' ಎಂದು ನಡುವೆ ಬಾಯಿ ಹಾಕಿ ನುಡಿದು ಬಿಟ್ಟಳು. ಇದನ್ನು ಕೇಳಿ ಭೀಮರಾಯರು ರೊಚ್ಚಿಗೆದ್ದರು. ಮೋರೆಯು ಕೆಂಪಾಯಿತು; ಕಣ್ಣುಗಳಿಂದ ಕಿಡಿಗಳು ಹಾರಹತ್ತಿದವು. 'ಚಾಂಡಾಲೆ! ನಿನಗೆ ಗಂಡನು ಬೇಕಾಗಿಲ್ಲವೆಂದು ತೋರುತ್ತದೆ. ಅಂತೆಯೇ ಬಿಡಿಸಿಕೊಂಡು ಬರಬಾರದೆಂದು ಹೇಳುವಿಯಾ? ಹೋಗು! ನಮಗೆ ಈ ನಿನ್ನ ಸುಡುಗಾಡ ಮೋರೆಯನ್ನು ತೋರಿಸಬೇಡಾ' ಎಂದು ಗದ್ದರಿಸಿ ಅರ್ಧ ಊಟಕ್ಕೆ ಎದ್ದು ಅವಳನ್ನು ಒದ್ದು ಹೊರದಬ್ಬಿಬಿಟ್ಟರು. ಭೀಮರಾಯರು ಮನಿಯಾರ್ಡರ ದ್ವಾರದಿಂದ ಮರುದಿವಸ ದಂಡದ ಹಣ ತುಂಬಿ ಬಿಟ್ಟರು. ಆದರೆ ಶ್ಯಾಮನು ಊರಿಗೆ ಬರಲೇ ಇಲ್ಲ. ತಾಯಿಗೆ ನಿರಾಶೆಯಾಯಿತು.

* * * *

ಹೊರಗೆ ಹಾಕಲ್ಪಟ್ಟಂದಿನಿಂದ ವಿಮಲೆಯು ಊಟಮಾಡುವದನ್ನು ಬಿಟ್ಟುಕೊಟ್ಟಳು. ಕೆಲಸವನ್ನು ಮಾತ್ರ ಮೊದಲಿಗಿಂತ ಇಮ್ಮಡಿಜೋರಿನಿಂದ ನಡಿಸಿದಳು. ಗಂಡನ ಹೇಳಿಕೆಯ ಮೇರೆಗೆ ಸರೆ, ಸಿಂದಿ, ಪರದೇಶೀ ಬಟ್ಟೆಗಳಿಂದುಂಟಾಗುವ ದೇಶದ ಹಾನಿಯನ್ನು ಜನರಿಗೆ ದುಷ್ಪರಿಣಾಮವನ್ನೂ ಹೇಳತೊಡಗಿದಳು. ಇವಳು ಸ್ವಾರ್ಥತ್ಯಾಗ ಪೂರ್ವಕ ನಡೆಸಿದ ಕೆಲಸದಿಂದ ಆ ಊರಲ್ಲಿ ಬಹಳೇ ಜಾಗೃತಿ

ಯಾಯಿತು. ಬರಬರುತ್ತ ಗಾಂಧೀಹುಚ್ಚಿನ ಬೇಗೆಯು ಊರಲ್ಲೆಲ್ಲ ಹಬ್ಬಹತ್ತಿತು. ಐದಾರು ದಿವಸಗಳಲ್ಲಿಯೇ ಇವಳಿಗೂ ಸ್ವರಾಜ್ಯಾಶ್ರಮದ ಕರೆ ಬಂದಿತು. ಊರಜನರೆಲ್ಲರೂ ಸನ್ಮಾನಪೂರ್ವಕವಾಗಿ ಇವಳನ್ನು ಕಳಿಸಿಬಂದರು. ಸ್ತ್ರೀಯು ಇಷ್ಟೊಂದು ಸ್ವಾರ್ಥತ್ಯಾಗದಿಂದ ಕೆಲಸವನ್ನು ಮಾಡುವದನ್ನು ಕಂಡು ಯಾವ ಪುರುಷನಿಗೆ ನಾಚಿಕೆ ಬರಲಿಲ್ಲ? ಅಂತೂ ಗಾಂಧೀ ಹುಚ್ಚೆಂಬ ಕಿಚ್ಚು ಊರೆಲ್ಲ ಪಸರಿಸಿತು.

ದಂಡ ತುಂಬಿ ಬಿಡುಗಡೆ ಮಾಡಿಸಿ ತನ್ನ ಮಾನಕ್ಕೆ ಕಲಂಕ ತಂದದ್ದಕ್ಕಾಗಿ ತಮ್ಮೂರವರಿಗೆ ಮೋರೆ ತೋರಿಸುವದೆಂದರೆ ಶ್ಯಾಮನಿಗೆ ನಾಚಿಕೆ ತನ್ನ ಬಿಡುಗಡೆಯಾದೊಡನೆ ತಮ್ಮೂರಿಗೆ ಬರದೆ ತಮ್ಮೂರಿನ ಸುತ್ತುಮುತ್ತಲಿನ ಹಳ್ಳಿಗಳ ಜಾಗೃತಿಯ ಕೆಲಸವನ್ನು ಒತ್ತರದಿಂದ ಸಾಗಿಸಿದ. ಆಗಿನ ಪರಿಸ್ಥಿತಿಯಲ್ಲಿ ಸರಕಾರದವರು ಇಂಥವರನ್ನು ಹೊರಗೆ ಬಹಳ ದಿನ ಉಳಿಯಗೊಡುತ್ತಿದ್ದಿಲ್ಲೆಂಬುದು ಶತಸಿದ್ಧಾಂತವಾದ ಮಾತಾಗಿತ್ತು. ವಾರಂಟು ತಂದೇ ಬಿಟ್ಟರು. ಈ ಸುದ್ದಿಯು ಹಬ್ಬಿದೊಡನೆ ಸುತ್ತು ಮುತ್ತಲಿನ ಎಲ್ಲ ಹಳ್ಳಿಯವರೂ ಸೇರಿದರು. ದೊಡ್ಡ ಮೆರವಣಿಗೆ ತೆಗೆದು ಕೊರಳತುಂಬ ಮಾಲೆ ಹಾಕಿ ವಿಜೃಂಭಣೆಯಿಂದ ಶ್ಯಾಮನನ್ನು ಕಚೇರಿಗೆ ಮುಟ್ಟಿಸಿದರು. ದಂಪತಿಗಳಿಬ್ಬರಿಗೂ ನಾಲ್ಕು ತಿಂಗಳ ಸಜೆಯಾಯಿತು. ಮರುದಿನದ ಪತ್ರಿಕೆಯಲ್ಲಿ ಇವರ ಚಿತ್ರಗಳಾದರೂ ಬಂದು ಬಿಟ್ಟವು.

*   *   *   *

ಒಂದು ದಿವಸ ಶ್ಯಾಮನ ತಾಯಿಯು ಸಕ್ಕರೆಯ ಪಟ್ಟಣವನ್ನು ಬಿಚ್ಚುತ್ತ ಕುಳಿತಿದ್ದಳು. ನೋಡುತ್ತಾಳೆ ಸಕ್ಕರೆ ಕಟ್ಟಿದ ವರ್ತಮಾನ ಪತ್ರದ ತುಂಡಿನ ಮೇಲೆ ಶ್ಯಾಮ ವಿಮಲೆಯರ ಚಿತ್ರ. "ಅಹಾ! ಸಕ್ಕರೆಯಂತೆ ಇಡೀ ಕರ್ನಾಟಕಕ್ಕೆ ಸವಿಯಾಗಿರುವವರನ್ನು ಹುಚ್ಚರೆಂದು ತಿಳಿದೆವಲ್ಲ!" ಎಂದು ಅಂದು ಕಣ್ಣರೆಪ್ಪೆಗಳನ್ನು ಅಗುಲಿಸದೆ ಒಂದೇ ಸವನೆ ಆ ಚಿತ್ರವನ್ನು ನೋಡುತ್ತ ಕುಳಿತಳು. ಕೊರಳತುಂಬ ಮಾಲೆಗಳಿಂದ ಕಂಗೊಳಿಸುತ್ತಿದ್ದ ಆ ಚಿತ್ರಗಳು ರಾಧಾ-ಕೃಷ್ಣರ ಮೂರ್ತಿಯಂತೆ ಒಪ್ಪುತ್ತಿದ್ದವು. ಅದನ್ನು ನೋಡುತ್ತ ಕುಳಿತ ಹಾಗೆಲ್ಲ

ಶ್ಯಾಮನಿಗೆ ಬೈದದ್ದು, ಹುಚ್ಚನೆಂದು ತುಚ್ಛಮಾಡಿದ್ದು, ವಿಮಲೆಯನ್ನು ಹೊರಗೆ ಹಾಕಿಸಿದ್ದು ಒಂದೊಂದೇ ನೆನಪು ಆಗಹತ್ತಿದವು. ನೆನಪು ಆದ ಆದ ಹಾಗೆಲ್ಲ ಕಣ್ಣುಗಳಿಂದ ನೀರು ಸುರಿಸಹತ್ತಿದಳು

ಅಷ್ಟರಲ್ಲಿಯೇ ಭೀಮರಾಯರು ಬಂದರು. ಎದೆಯ ಮೇಲೆ ಕಾಗದದ ತುಂಡನ್ನಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿರುವ ಹೆಂಡತಿಯನ್ನು ಕಂಡರು. ಕಾಗದದ ತುಂಡನ್ನು ಕೈಯಲ್ಲಿ ತೆಗೆದುಕೊಂಡು ಒಂದೇಸವನೆ ಅದರ ಕಡೆಗೆ ದಿಟ್ಟಿಸಿ ನೋಡಹತ್ತಿದರು ಚಮತ್ಕಾರವಾಯಿತು ನೋಡಿ! ಒಂದೆರಡು ನಿಮಿಷಗಳಲ್ಲಿಯೇ ಭೀಮರಾಯರ ಮುಖದ ಮೇಲೆಯೂ ಗಾಂಧೀ ಹುಚ್ಚು ಮೂಡಿಬಂದಿತು ತಮ್ಮನ್ನು ತಾವೇ ಹಳಿದುಕೊಂಡರು ಗಂಡ ಹೆಂಡರಿಬ್ಬರೂ ಎಷ್ಟೋ ಹೊತ್ತಿನವರೆಗೆ ತೆಕ್ಕೆಮುಕ್ಕಿ ಹಾಕಿಕೊಂಡು ಬಾರಿಬಾರಿಯಂತೆ ಕಣ್ಣೀರು ಸುರಿಸಹತ್ತಿದರು. ತಮ್ಮ ಪಾಪ ಪರಿಹಾರ್ಥವಾಗಿ ಆ ಕ್ಷಣದಿಂದ ಖಾದೀ ವಸ್ತ್ರಗಳನ್ನು ಧರಿಸಹತ್ತಿದರು.

ನಾಲ್ಕು ತಿಂಗಳಾದವು ಶಿಕ್ಷೆಯ ಅವಧಿಯು ಮುಗಿದು ಶ್ಯಾಮವಿಮಲೆಯರ ಬಿಡುಗಡೆಯಾಯಿತು. ಎಲ್ಲಿ ನೋಡಿದಲ್ಲಿ ಅವರ ಕೀರ್ತಿಯು. ಇವರನ್ನು ಕಾಣಬೇಕೆಂದು ಎಷ್ಟೋ ಜನರು ಮುಂಚಿತವಾಗಿಯೇ ಇವರೂರಿಗೆ ಬಂದಿದ್ದರು. ಇವರು ಬರುವ ದಿನ ಊರೆಲ್ಲ ಸಿಂಗಾರ. ಮನೆಮನೆಗೆ ತಳಿರು ತೋರಣಗಳನ್ನು ಕಟ್ಟಿ, ರಾಷ್ಟ್ರಧ್ವಜಗಳನ್ನು ಹಚ್ಚಿ, ಬಾಗಿಲುಗಳಿಗೆ ದೇಶಭಕ್ತರ ಪಟಗಳನ್ನು ತೂಗಹಾಕಿದ್ದರು ಬೀದಿಗಳಲ್ಲಿ ಅಲ್ಲಲ್ಲಿಗೆ ಸ್ವಾಗತಮಂಟಪಗಳನ್ನು ಕಟ್ಟಿ, ನಾನಾತರದ ಹೂಮಾಲೆಗಳಿಂದ ಅವುಗಳನ್ನು ಸಿಂಗರಿಸಿದ್ದರು. ಸನ್ಮಾನದಿಂದ ಇವರನ್ನು ಕರೆತರುವದಕ್ಕಾಗಿ ಅಗಸೆಯ ಬಾಗಿಲ ಹತ್ತಿರ ಕುದುರೆಯ ಗಾಡಿಯನ್ನು ಮುಂಚಿತವಾಗಿಯೇ ಸಿದ್ಧಮಾಡಿಟ್ಟಿದ್ದರು. ಶಾಮ-ವಿಮಲೆಯರು ಬಂದೊಡನೆ ಅವರಿಗೆ ಗಾಡಿಯಲ್ಲಿ ಕೂಡ್ರಲು ಜನರು ಬಹಳ ಒತ್ತಾಯಪಡಿಸಿದರು. ಆದರೆ " ನಾವು ಇನ್ನೂ ಗುಲಾಮಗಿರಿಯಿಂಥ ಪಾರಾಗಿಲ್ಲ. ನಾವು ಇಷ್ಟೊಂದು ಉಲ್ಹಾಸದಿಂದ ಮೆರೆಯುವ

ಸಮುಯುವು ಇದಲ್ಲ.'' ಎಂದು ಶಾಮನು ಹೇಳಿದ. ಇಬ್ಬರೂ ಕಾಲು ನಡುಗೆಯಿಂದಲೇ ನಡೆದು ಬಂದರು. ದೇವತೆಗಳು ಪುಷ್ಪವೃಷ್ಟಿಯನ್ನು ಗರೆಯುತ್ತಿರುವರೋ ಏನೋ ಎಂಬಂತೆ ಮೆರವಣಿಗೆ ನೋಡಲು ಉಪ್ಪರಿಗೆಯ ಮೇಲೆ ನಿಂತಿದ್ದ ಜನರು ಮೇಲಿಂದ ಮೇಲೆ ಪುಷ್ಪಗಳನ್ನು ತೂರುತ್ತಲಿದ್ದರು ಅಲ್ಲಲ್ಲಿಗೆ ಬಾಲಿಕೆಯರು ಈ ಸಂಪತಿಗಳ ಕೊರಳಲ್ಲಿ ಮಾಲೆಯನ್ನು ಹಾಕಿ ಇವರ ಮೇಲೆ ಕಟ್ಟಿದ ಹೊಸ-ಹೊಸ ಪದಗಳನ್ನು ಹೇಳುತ್ತ ಆರತೀ ಬೆಳಗುತ್ತಿದ್ದರು. ಜಯಘೋಷಗಳ ಸಪ್ಪಳವನ್ನು ಕೇಳಿ ಮೆರವಣಿಗೆ ನೋಡುವದಕ್ಕೆಂದು ಸ್ತ್ರೀಯರು ತಮ್ಮ ಕೈಯೊಳಗಿನ ಕೆಲಸವನ್ನು ಇದ್ದಕ್ಕಿದ್ದಲ್ಲಿಯೇ ಬಿಟ್ಟು ಅವಸರದಿಂದ ಓಡಿ ಬಂದರು. ಆ ದಿನ ಆ ಊರು ದೇವಲೋಕವೇ ಆಗಿಬಿಟ್ಟಿದ್ದಿತು.

ಶ್ಯಾಮನ ತಾಯಿ-ಪೂಮಾಲೆ, ಆರತಿಯ ತಟ್ಟೆ ಮೊದಲಾದವುಗಳನ್ನು ಸಿದ್ಧಪಡಿಸಿಕೊಂಡು ಶಾಮನ ದಾರಿಯನ್ನೇ ಕಾಯುತ್ತ ಭೀಮರಾಯರೊಡನೆ ಮುಂಬಾಗಿಲಲ್ಲಿ ಕುಳಿತಿದ್ದಳು. ಮೆರವಣಿಗೆಯು ಶಾಮನ ಮನೆಯ ಬಾಗಿಲಿಗೆ ಬಂದಿತು. ತನ್ನ ತಂದೆತಾಯಿಗಳಿಗೂ ದೇಶದ ಪರಿಸ್ಥಿತಿಯ ಬಗ್ಗೆ ಕಳವಳವೆನಿಸಿ ಗಾಂಧೀ ಹುಚ್ಚು ಹಿಡಿದದ್ದು ಶಾಮನಿಗೆ ತಿಳಿದು ಬಂದಿದ್ದಲ್ಲ. ಬಾಗಿಲಲ್ಲಿ ಖಾದೀ ಉಡುಪು ತೊಟ್ಟುಕೊಂಡು ಕುಳಿತ ತಂದೆತಾಯಿಗಳನ್ನು ಕಂಡು ಅವನಿಗೆ ಪರಮಾಶ್ಚರ್ಯವಾಯಿತು. ಬೆರಗುಗಣ್ಣುಗಳಿಂದ ಅವರ ಕಡೆಗೆ ಎವೆಇಕ್ಕದೆ ಒಂದೇ ಸವನೆ ನೋಡಿದ. ಶಾಮನ ತಾಯಿ ದಂಪತಿಗಳಿಗೆ ಆರುತಿಯನ್ನು ಮಾಡಿ ಹರಿಸಿದಳು. ಭೀಮರಾಯನು ಶಾಮನನ್ನು ಅಪ್ಪಿಕೊಂಡು "ಕಂದಾ ನನ್ನ ಅಪರಾಧವನ್ನು ಕ್ಷಮಿಸು! ಮಹಾತ್ಮರನ್ನು ಹುಚ್ಚನೆಂದು ಬಗೆಯಲಿಕ್ಕೆ ನನ್ನ ಮನಸ್ಸು ಹೇಸಲಿಲ್ಲ! ನಿನಗೂ ನಿನ್ನ ಧರ್ಮಪತ್ನಿಯಾದ ವಿಮಲೆಗೂ ನಾನಾತರದಿಂದ ಕಷ್ಟಗಳನ್ನು ಕೊಡಲಿಕ್ಕೆ ಸಹ ನನ್ನ ಮನಸ್ಸು ಹಿಂಜರಿಯಲಿಲ್ಲ! ವತ್ಸಾ, ಈ ನನ್ನ ಘನಘೋರ ತಪ್ಪುಗಳನ್ನು ಕ್ಷಮಿಸು" ಎಂದು ಹೇಳಹೇಳುತ್ತ ಕುತ್ತಿಗೆಯ ಶಿರ ಬಿಗಿದು ಬಂದು ಕಣ್ಣೀರು ಸುರಿಸಹತ್ತಿದರು. "ಅಪ್ಪಾ! ನಿಮ್ಮಲ್ಲಿ ಏನೂ ಅಪರಾಧವಿಲ್ಲ. ಮಹಾತ್ಮರ ತತ್ವವು ಒಮ್ಮೆಲೇ ಎಲ್ಲರ ತಲೆ

ಯಲ್ಲಿ ಸೇರುವದಿಲ್ಲ. ಇಡೀ ಹಿಂದೀ ಜನಾಂಗವು ಮಹಾತ್ಮರ ಹೇಳಿಕೆಯ ಪ್ರಕಾರ ಪಾಲಿಸಹತ್ತಿದರೆ ಅವರ ಮುಂದೆ ಯಾರ ಆಟವೂ ನಡೆಯುವಂತಿಲ್ಲ. ಆದರೆ ಇಷ್ಟು ದಿನಗಳವರೆಗೆ ಗುಲಾಮಗಿರಿಯಲ್ಲಿ ಕೊಳೆತು ಪ್ರತಿಯೊಬ್ಬನಲ್ಲಿಯೂ ಹೇವ. ಸ್ವಾರ್ಥಬುದ್ಧಿ ಮೊದಲಾದವುಗಳು ಬೇರೂರಿವೆ. ಮನುಷ್ಯತ್ವವೇ ಅಳಿದು ಹೋಗಿದೆ. ಇಂಥ ದಿನಗಳು ಹೀಗೆಯೇ ಕೊನೆಯವರೆಗೆ ಉಳಿಯಲಾರವು. ಇಂದಿಲ್ಲ ನಾಳೆ ಎಲ್ಲರಿಗೂ ಗಾಂಧೀಹುಚ್ಚು ಹಿಡಿದೇ ತೀರುತ್ತದೆ.' ಎಂದು ಹೇಳಿ ಶ್ಯಾಮನು ತಂದೆಯನ್ನು ಸಮಾಧಾನ ಪಡಿಸಿದನು. ಆ ದಿವಸ ಸಾಯಂಕಾಲ ದೊಡ್ಡ ಸಭೆ ಸೇರಿತು. ಸಭೆಯಲ್ಲಿ ದಂಪತಿಗಳಿಗೆ ಮಾನಪತ್ರ ಕೊಡಲಾಯಿತು. ತಮ್ಮ ಪಾಪಗಳನ್ನು ತೊಳೆದುಕೊಳ್ಳುವದಕ್ಕಾಗಿ ಭೀಮರಾಯರು ಗಂಟೆಗೆ ಗಂಟುಹಾಕಿ ಇಷ್ಟು ದಿನಗಳವರೆಗೆ ಕೂಡಿಟ್ಟ ಎಲ್ಲ ಹಣವನ್ನು ದೇಶಸೇವೆಗಾಗಿ ಕೊಟ್ಟುಬಿಟ್ಟರು.

ಗಾಂಧೀ ಹುಚ್ಚೆಂದರೆ ಹೀಗಿದೆ ನೋಡಿ! ಮನುಷ್ಯನು ದುರ್ವ್ಯಸನಗಳಿಂದ ಮುಕ್ತನಾಗಿ ಸುಸಂಸ್ಕೃತಿಯುಳ್ಳವನಾಗುತ್ತಾನೆ ಸ್ವಾರ್ಥಬುದ್ಧಿಯು ಅಳಿದು ಉಚ್ಚತರಗತಿಯವನಾಗುತ್ತಾನೆ. ಹೇಡಿತನವು ದೂರಾಗಿ ವೀರಪುರುಷನಾಗುತ್ತಾನೆ. ಪರದೇಶೀ ಮೋಹವು ಬಯಲಾಗಿ ಬಡತನದಿಂದ ಸಾಯುತ್ತಿರುವ ತನ್ನ ದೇಶಬಾಂಧವರಿಗೆ ಕೂಳು ಸಿಗುವಂತಹ ದೇಶೀ ಮಾಲನ್ನು ಪ್ರೀತಿಸಹತ್ತುತ್ತಾನೆ. ಎಲ್ಲ ಕ್ಷುಲ್ಲಕ ಬುದ್ಧಿಗಳು ನಾಶವಾಗಿ ನಿಜವಾದ ಮನುಷ್ಯತ್ವವುಳ್ಳ ಮನುಷ್ಯನಾಗುತ್ತಾನೆ.